ಮಿಂಚಿನಬಳ್ಳಿಯ ಎರಡನೆಯ ವರುಷದ ನಾಲ್ಕನೆಯ ಕುಡಿ

# ಕನ್ನಡ ಸಾಹಿತ್ಯವಾಹಿನಿ

ಶ್ರೀ

ಬರೆದವರು:

ಎಸ್. ಕೆ. ಕುಲಕರ್ಣಿ,

ಎಂ. ಎ.

ಚಾಲುಕ್ಯ ವಿಕ್ರಮ ವರುಷ, ೮೬೪

ಬನದ ಹುಣ್ಣಿವೆ

೧೯೩೯

ಸಾದಾ ಪ್ರತಿ ೧ ರೂ. ★ ಕ್ಯಾಲಿಕೊ ಪ್ರ. ೧ ರೂ. ೮ ಆ.

ಬೆಳಕು ಕೊಟ್ಟು
ಕಣ್ಮರೆಯಾದ ನನ್ನ ತಂದೆ-ತಾಯಿಗಳಿಗೆ
ಭಕ್ತಿಯ ಕಾಣಿಕೆ

**—ಎನ್. ಕೆ.**

★

★

ಮೂರನೆಯ ವರುಷದ ಮೊದಲನೆಯ ಕುಡಿ

# ಭಾರತದ ರಾಜಕೀಯ ಸಮಸ್ಯೆ

ಅರ್ಥಾತ್

ವಿಲ್ ಡ್ಯೂರಂಟರ

# The Case for India

ಕನ್ನಡಿಸಿದವರು:

ಸ್ವಾತಂತ್ರ್ಯ ಪ್ರಿಯ

ಕಾಂಗ್ರೆಸ್ ಅಧಿವೇಶನದ ದಿನವೇ ಪ್ರಕಟವಾಗುವುದು.

★

# ಒಂದೆರಡು ಮಾತುಗಳು

ಕನ್ನಡ ಸಾಹಿತ್ಯವಾಹಿನಿಯು ಈ ವರುಷದ ಕೊನೆಯ ಪುಸ್ತಕವು. ಇದು ಸಾಹಿತ್ಯ ಪರಿಷತ್ತಿನ ಸಮಯಕ್ಕೇ ಹೊರಬೀಳಬೇಕಿತ್ತು. ಆದರೆ ಮುದ್ರಣಾಲಯದ ಕೆಲವು ಅನಾನುಕೂಲತೆಗಳ ಮೂಲಕ ೧ ತಿಂಗಳು ತಡವಾಗಿದೆ. ವಾಚಕರು ಕ್ಷಮಿಸುವರೆಂದು ಆಶಿಸುತ್ತೇನೆ. ಮುಂದಿನ ವರುಷದ ಮೊದಲನೆಯ ಪುಸ್ತಕವು ತಪ್ಪದೆ ಮಾರ್ಚ ತಿಂಗಳದಲ್ಲಿಯೇ ಹೊರಬೀಳುವುದು.

ಎಂಚಿನ ಬಳ್ಳಿಯ ಆರ್ಥಿಕ ಪರಿಸ್ಥಿತಿಯು ಹೋದ ವರುಷದಂತೆಯೆ ಇದೆ. ಈ ವರುಷವೂ ೪೦೦ ರೂಪಾಯಿಗಳ ಸಾಲವಾಗಿದೆ. ಈಗ

ಪುಸ್ತಕಗಳನ್ನು ತೆಗೆದುಕೊಂಡವರಿಂದೆಲ್ಲ ಹಣ ಬಂದರೆ, ಋಣಮುಕ್ತ ವಾಗುವುದು. ಏನೇ ಇರಲಿ, ನನ್ನ ಸಂಕಲ್ಪದಂತೆ, ಮೂರು ವರುಷ ವಂತೂ ನಡೆಯಿಸಿಯೇ ತೀರುತ್ತೇನೆ. ಎಂಂಚಿನ ಬಳ್ಳಿಯನ್ನು ಕಮರಿಸು ವುದು, ನೀರೆರೆದು ಬೆಳೆಯಿಸುವುದು ಕನ್ನಡಿಗರನ್ನೇ ಕೂಡಿದೆ.

ಕನ್ನಡ ಸಾಹಿತ್ಯವಾಹಿನಿಯು, ಸಾಹಿತ್ಯದೃಷ್ಟಿಯಿಂದ ಕನ್ನಡ ದಲ್ಲಿ ಮೊದಲನೆಯ ಪ್ರಯತ್ನವು. 'ಕನ್ನಡ ಸಾಹಿತ್ಯ ಚರಿತ್ರೆ' ಎಂಬ ಚಿಕ್ಕ ಪುಸ್ತಕವು ಹೊರಬಿದ್ದಿದೆ. ಆದರೆ ಅದರಲ್ಲಿ ರೂಪರೇಷೆಗಳು ಮಾತ್ರ ಇವೆ. ಇದು ಅದಕ್ಕಿಂತಲೂ ಸ್ವಲ್ಪ ದೊಡ್ಡ ಪ್ರಯತ್ನವು. ನಮ್ಮ ಜನ್ನಹದ ಮೇರೆಗೆ ಶ್ರೀ. ಎನ್. ಕೆ. ಕುಲಕರ್ಣಿಯವರು ಪರಿಶ್ರಮ ಪೂರ್ವಕವಾಗಿ ಈ ಪುಸ್ತಕವನ್ನು ಬರೆದುಕೊಟ್ಟುದಕ್ಕಾಗಿ, ಎಂಂಚಿನ ಬಳ್ಳಿಯು ಅವರಿಗೆ ಋಣಿಯಾಗಿದೆ.

ಈ ಪುಸ್ತಕಕ್ಕೆ ತಮ್ಮ ಸಲಹೆಗಳನ್ನೂ ಟಿಪ್ಪಣಿಗಳನ್ನೂ ಬರೆಯಲು ಬೇಕಾಗುವ ಪುಸ್ತಕಗಳನ್ನೂ ಕೊಟ್ಟು ಕ್ಷಣಕ್ಷಣಕ್ಕೆ ನೆರವನ್ನಿತ್ತ ಗೆಳೆಯರಾದ ಕೃ. ಶ್ರೀ. ಬೆಟಗೇರಿಯವರ ಉಪಕಾರವನ್ನು ಮರೆಯು ವುದು ಅಶಕ್ಯ. ಅದರಂತೆಯೇ ನಾಟಕದ ವಿಷಯವಾಗಿ ಹಲವು ಸೂಚನೆ ಗಳನ್ನು ಕೊಟ್ಟ ಗೆಳೆಯರಾದ ಬೇಂದ್ರೆಯವರಿಗೂ ನಾನು ಋಣಿಯಾಗಿ ದ್ದೇನೆ. ಬರೆಯಲು ಬೇಕಾಗುವ ಹಲವು ಪುಸ್ತಕಗಳನ್ನು ಒದಗಿಸಿಕೊಟ್ಟ ಕ. ವಿ. ವ. ಸಂಘಕ್ಕೂ ನಾನು ಋಣಿಯಾಗಿದ್ದೇನೆ

ಶ್ರೀ. ಮುಳಿಯ ತಿಮ್ಮಪ್ಪಯ್ಯನವರು ಪಂಪನ ಪಡಿಯಚ್ಚನ್ನು ದೊರಕಿಸಿ ಕೊಟ್ಟುದಕ್ಕಾಗಿಯೂ, ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟಮೆಂಟಿನವರು, ಪಲ್ಮಿಡಿಯ ಶಾಸನದ ಪಡಿಯಚ್ಚನ್ನು ಕೊಟ್ಟು ನೆರವಾದದ್ದಕ್ಕಾಗಿಯೂ ನಾನು ಅವರಿಗೆ ಆಭಾರಿಯಾಗಿದ್ದೇನೆ.

ಕನ್ನಡ ಚಳವಳಿಯ ಈ ಕಾರ್ಯದಲ್ಲಿ ಕನ್ನಡಿಗರೆಲ್ಲರೂ ನೆರವಾಗ ಬೇಕಾಗಿ ಬಿನ್ನವಿಸುತ್ತೇನೆ.

೨೬-೧-೪೦ ಬಾರ್ಲಿ ಬಿಂದುಮಾಧವ

# ಅರಿಕೆ

ಅಂತೂ ಒಮ್ಮೆ 'ಕನ್ನಡಸಾಹಿತ್ಯವಾಹಿನಿ' ಕನ್ನಡ ಸಹೃದಯರ ಕೈಸೇರಿತೆಂದು ಹೇಳಬಹುದು. ಈ ಅರಿಕೆ ಪ್ರಕಾಶಕರಿಂದ ಬರಬೇಕಾಗಿದ್ದಿತಲ್ಲವೆ? ಪ್ರಕಾಶನದ ಕಾರ್ಯದಲ್ಲಿ ಕೆಲವೊಂದು ಅನಾನುಕೂಲತೆಗಳಿಗೆ ಗ್ರಂಥಕರ್ತರೂ ಹೊಣೆಗಾರರಿರುತ್ತಾರೆಂಬರ್ಥದಲ್ಲಿ ಈ ಅರಿಕೆ ಗ್ರಂಥಕರ್ತನಿಂದಲೆ ಬಂದಿದ್ದರೆ ಅದೇನು ಆಶ್ಚರ್ಯವಲ್ಲ. ಅಚ್ಚಿನ ಕಾರ್ಯವು ಬರೆಹಗಾರರ ಮೇಲೆ ಅಚ್ಚೊತ್ತಿದಾಗಲೆ ಬರೆಯುವ ಕೆಲಸ ಭರದಿಂದ ಸಾಗುವುದು.

ಪ್ರಕಾಶಕರು ಮೊದಲೆ ಪ್ರಕಟಿಸಿದ 'ಕನ್ನಡಸಾಹಿತ್ಯ ಚರಿತ್ರೆ'ಯೆ ಈಗ ಕನ್ನಡ ಸಾಹಿತ್ಯವಾಹಿನಿ'ಯಾಗಿ ಹೊರಬಿದ್ದಿದೆ ಹೆಸರು ಹೆಚ್ಚು ಕಡಿಮೆಯಾಯಿತೆಂದು ಬರೆದವರೂ ಹೆಚ್ಚು ಕಡಿಮೆಯಾದರೆಂದು ತಿಳಿಯುವ ಕಾರಣವಿಲ್ಲ. ಮೂಲದ ಹೆಸರನ್ನು ಪ್ರಕಾಶಕರು ಸಾಮಾನ್ಯಾರ್ಥದಲ್ಲಿ ಒಂದು ಪ್ರಕಟನೆಯೆಂಬ ಮಟ್ಟಿಗೆ ಅರುಹಿದ್ದರು. ಆಗ ಪೂರ್ಣ ಹಸ್ತ ಪ್ರತಿಯಿನ್ನೂ ಅವರ ಕೈಗೆ ಬಂದಿರಲಿಲ್ಲ. 'ಸಾಹಿತ್ಯಚರಿತ್ರೆ' 'ಸಾಹಿತ್ಯ ವಾಹಿನಿ' ಏಕಾಯಿತೆಂಬುದಕ್ಕೆ ಒಂದು ಚರಿತ್ರೆಯೂ ಉಂಟು, ಚರಿತ್ರೆ ಯೆಂದರೇನು ಕೆಲವೊಂದು ಕಾರಣಗಳುಂಟು ಇಷ್ಟೇ. ಈಗ ಸಾಹಿತ್ಯ ವಾಹಿನಿಯಾಗಿರುವ ಗ್ರಂಥದ ಮೂಲ ಹೊತ್ತಗೆಯು ಹೇಳುವುದಕ್ಕೆ ಯಾವುದೂ ಹೆಸರಿಲ್ಲದೆ ಬರೆದವನ ಪರೀಕ್ಷೆಯು ಅಭ್ಯಾಸದ ನಿಧಿಯಾಗಿ ದ್ದಿತು ಅದನ್ನು ಗಾಡಕ್ಕೆ ಹಚ್ಚಿ ಸಾಣೆವಿಡಿದು ನಯವಾಗಿಸಿ ಗ್ರಂಥ ಕನ್ನಿಕೆಯನ್ನಾಗಿ ಅಚ್ಚಿನಮನೆಗೆ ಕಳಿಸುವ ಸಿದ್ಧತೆಯಾಗಿರಲಿಲ್ಲ. ಆಗ ಶ್ರೀಮಾನ್ ಬುರ್ಲಿ ಬಿಂದುಮಾಧವಚಾರ್ಯರು ಈ ಮೂಲನಿವಾಸಿಗೆ ನಾಗರಿಕತೆಯ ಅಚ್ಚೊತ್ತಿ ಪ್ರಕಟಗೊಳಿಸುವ ಸದಿಚ್ಛೆಗೆ ಕೈಹಾಕಿದರು; ಮುಂದಿನ ಪ್ರಕಟನೆಯೇ ಎಂದು ಪ್ರಸಿದ್ಧಿಸಿಯೂ ಬಿಟ್ಟರು. ಅಂದಿನಿಂದ ಮೂಲವನ್ನೂ ಅಚ್ಚಿಗಾಗಿ ತಯಾರಿಸಲು ಆರಂಭವಾಯಿತು. ಬರೆಬರೆದ ಹಾಗೆ ಮೂಲದ ಸ್ವರೂಪವು ಬದಲಾಗಹತ್ತಿತ್ತು. ಮೂಲದಲ್ಲಿ ಕೇವಲ ಆಯಾ ಶತಮಾನಗಳ ಸಾಮಾಜಿಕ ಧಾರ್ಮಿಕ ಮತ್ತು ರಾಜಕೀಯ ಹಿನ್ನೆಲೆ; ಸಾಹಿತ್ಯ ಲಕ್ಷಣಗಳು ಮಹತ್ವದ ಗ್ರಂಥಗಳು ಮತ್ತು ಅವುಗಳ ವಿಮರ್ಶೆ ಹೀಗೆ ಇದ್ದಿತು. ಅಂತೆಯೆ ಅದಕ್ಕೆ ಸಾಹಿತ್ಯ ಚರಿತ್ರೆಯೆಂದು ಪ್ರಕಾಶಕರು ಕರೆದಿರಬೇಕು. ಆದರೆ ಮುಂದೆ ಕೆಲಪಂಡಿತರ ಸಲಹೆಯ ಮೇರೆಗೆ ಒಂದೊಂದು ಪ್ರಕರಣವನ್ನೂ ಕನ್ನಡ ಸಾಹಿತ್ಯದ ಒಗ್ಗೆ ಒಂದೊಂದು ಪ್ರಬಂಧವನ್ನಾಗಿ ಒರೆಯಬೇಕೆಂಬ ಮೇರೆಗೆ ಮೊದಲು ಮಾಡಲಾಯಿತು. ಇದರಲ್ಲಿ ಇ. ಪಿ. ರಾಯಿಸ್ ಅವರ ಅಭಿಪ್ರಾಯವನ್ನೆ ಹಿಡಿದೆತ್ತಿ ಮೂಲದ ಕನ್ನಡ ಸಾಹಿತ್ಯವಾಹಿನಿ ಶಾಸನಗಳಲ್ಲಿ ಉಗಮ ಹೊಂದಿ ಜೈನರ ಚಂಪೂಕಾವ್ಯಗಳಲ್ಲಿ ದೊಡ್ಡ ಪ್ರವಾಹವಾಗಿ ಹರಿದು ಮುಂದೆ ವೀರಶೈವ ಸಾಹಿತ್ಯದ ಶಾಖೆಯಾಗಿ ಒಡೆದು ಅಲ್ಲಿ ಮತ್ತೆ

ಷಟ್ಪದಿ, ವಚನ, ತ್ರಿಪದಿ ಮೊದಲಾದ ಉಪಶಾಖೆಗಳಾಗಿ ಹರಿದು ಹಾಗೆಯೆ ಮುಂದೆ ಮುಂದೆ ಸಾಗಿ ವೈಷ್ಣವ ಭಕ್ತಿಪಂಥದ ಸಾರ್ವಜನಿಕ ಸಾಹಿತ್ಯದ ಪೂರ್ಣ ಪಾಡುಂಗಬ್ಬವಾಗಿ ಹೇಗೆ ಹರಿಯುತ್ತ ಒಂದಿತೆಂಬು ದನ್ನು ತೋರಿಸುವದಕ್ಕಾಗಿ ಇದಕ್ಕೆ 'ಸಾಹಿತ್ಯವಾಹಿನಿ' ಎಂದು ನಾಮ ಕರಣ ಮಾಡಲಾಯಿತು.

ಈ ಪ್ರಕಾರ-ಕನ್ನಡದ ಪ್ರಾಚೀನತೆ, ಕನ್ನಡ ಸಾಹಿತ್ಯದ ವಿವಿಧ ರೂಪಲಕ್ಷಣಗಳು, ಕನ್ನಡ ಸಾಹಿತ್ಯದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆ, ಸಮಷ್ಟಿ ಕನ್ನಡ ಸಾಹಿತ್ಯಕ್ಕೆ ವಿವಿಧ ಕವಿಗ ಳಿಂದಾದ ಪರಿಪುಷ್ಟಿ, ಕೆಲಮಹತ್ವದ ಕನ ಡ ಕವಿಗಳು ಮತ್ತು ಅವುಗಳ ಕಾವ್ಯ ವಿಮರ್ಶೆ ಎಂದು ಮೊದಲಾಗಿ ವಿಭಾಗಿಸಲ್ಪಟ್ಟ ಗ್ರಂಥರಚನೆಯಾ ಯಿತು. ಆದರೆ ಅದೆಲ್ಲವನ್ನೂ ಒಂದೇ ಪುಸ್ತಕವನ್ನಾಗಿ ಹಾಕಿದರೆ ಮೂರುನೂರು ಪುಟ ಮಿಕ್ಕಬಹುದೆಂದರಿತು ನನಗೆ ಹಿರಿಯರಾದ ಸಂಪಾ ದಕರು ಕೆಲವಷ್ಟು ಭಾಗಗಳನ್ನೆ ಆಯ್ದುಕೊಂಡು ಆದರೂ ಒಂದು ಇಡಿ ಯಾದ ಪರಿಪೂರ್ಣ ಗ್ರಂಥವಾಗುವಂತೆ ಸಧ್ಯದ ಪುಸ್ತಕವನ್ನು ಮೂಲ ದಲ್ಲಿ ಇಲ್ಲಿಯ ಮಟ್ಟಿಗೆ ಪ್ರಸಿದ್ಧಿಸಿದರು. ಮುಂದಿನ ಭಾಗವೂ ಗ್ರಂಥ ಕರ್ತನ ಸ್ವಂತ ಪರಿಶ್ರಮದಿಂದಲೊ ಮಿಂಚಿನ ಒಳ್ಳಿಯಿಂದಲೊ ಬೇಗನೆ ಬರುವುದು, ಇದನ್ನೊಂದು ಪರಿಪೂರ್ಣವಾದ ಕನ್ನಡ ಸಂಸ್ಕೃತಿ ದರ್ಶಕಗ್ರಂಥವನ್ನಾಗಿ ಮಾಡಬೇಕೆಂದು ಅದು ಹಾಗಾಗುವಂತೆ ಶ್ರೀ. ಬುರ್ಲಿಯವರೂ ಸಾಕಷ್ಟು ಪರಿಶ್ರಮಬಟ್ಟರು. ಇದಕ್ಕಾಗಿ ಕೆಲವು ಪ್ರಕರಣಗಳನ್ನು ಅವರು ಹಿಂದು ಮುಂದು ಮಾಡಬೇಕಾಗಿಯೂ ಬಂದಿತು. ಏಕೆ ತಮಗೆ ಅನುಕೂಲವಾಗುವಂತೆ ಮೂಲದಿಂದ ಈ ಗ್ರಂಥವನ್ನೂ ಪ್ರಕೃತಪ್ರಕಟನೆಯಾಗಿ ಹೊರಬೀಳುವಂತೆ ಮೂಲದ ಇದ ರಷ್ಟು ಭಾಗವನ್ನು ಅವರ ಅಚ್ಚಿಗಾಗಿ ಮತ್ತೊಮ್ಮೆಯೆ ಬರೆದು ತೆಗೆದರು. ಈ ದೃಷ್ಟಿಯಿಂದ ಗ್ರಂಥಕಾರ್ಯದ ಕೆಲವಷ್ಟು ಪರಿಶ್ರಮದ ಯಶಸ್ಸು ಅವರಿಗೆ ಸಲ್ಲಬೇಕು. ಇದಕ್ಕಾಗಿ ನಾನು ಅವರಿಗೆ ತುಂಬ ಉಪಕೃತ ನಾಗಿರುವೆ.

'ಬಲ್ಲರ್ ಪಲರೆಲ್ಲರ್' ತಿರ್ದಿದಷ್ಟೂ ಗ್ರಂಥವು ಹೆಚ್ಚು ಹೆಚ್ಚು ಪರಿಪೂರ್ಣತೆಯನ್ನು ಹೊಂದುತ್ತದೆ. ಶ್ರೀ. ಬುರ್ಲಿಯವರು ಇದನ್ನು ಅಚ್ಚು ಹಾಕಿಸುವ ಪರಿಶ್ರಮ ಕೈಕೊಂಡು ಮೊಳೆವ ಚಿಗುರಿಗೆ ನೀರೆರೆದು ಪೋಷಿಸಿದ್ದಾರೆ. ಅವರು ಹಿರಿಯರೆಂಬ ಅಭಿಮಾನದಿಂದ ಮೂಲದಲ್ಲಿ ಅಲ್ಲಲ್ಲಿ ಕೆಲವೊಂದು ಮಾರ್ಪಾಟುಗಳನ್ನು ಮಾಡಬಹುದೆಂದು ನಾನು ಭಕ್ತಿಯಿಂದ ಹೇಳಿದ್ದೆ. ಆದರೆ ಶ್ರೀ. ಬುರ್ಲಿಯವರು ೨ನೆಯ ಪುಟದ ಮೇಲೆ ದ್ರಾವಿಡರ ಮೂಲದ ಬಗ್ಗೆ ಕೆಲ ಆಧಾರಗಳನ್ನು ಶೇಖರಿಸುವಾಗ 'ನನ್ನ ಗೆಳೆಯರಾದ ಶ್ರೀಮಾನ್ ಶಂ. ಬಾ. ಜೋಶಿಯವರು..' ಎಂದು ಅರಿತೊ ಅರಿಯದೆಯೊ ಹೇಳಿಬಿಟ್ಟಿದ್ದಾರೆ. ನನಗೆ ಪೂಜ್ಯರಾದ ಶ್ರೀ. ಶಂ. ಬಾ. ಜೋಶಿಯವರಿಗೆ ನಾನು ಗೆಳೆಯನೆಂದು ಅವರನ್ನು ಕರೆಯಲಾರೆ. ಅವರು ನನಗೆ ಗುರುಸಮಾನರು. ಮೂಲದಲ್ಲಿ ವಚನಗಳಮೇಲಿನ ಪ್ರಕರಣ ಸಣ್ಣದೆ ಆಗಿತ್ತು. ಇಲ್ಲಿ ಶ್ರೀ. ದಿವಾಕರರ ಆಧಾರದಿಂದಲೇ ಶ್ರೀ. ಬುರ್ಲಿಯವರು ಹೆಚ್ಚು ವಿವರಿಸಿದ್ದಾರೆ. ಈ ವಿಷಯ ನನಗೆ ಆ ಮೇಲೆ ತಿಳಿದು ಬಂದುದರಿಂದ ಹಿರಿಯರಾದ ದಿವಾಕರರ ಉಪಕಾರವನ್ನು ಇಲ್ಲಿಯೆ ಸ್ಮರಿಸುವೆ. ಕೆಲನೆಡೆಗಳಲ್ಲಿ 'ಕಾತುರ' 'ನಾಡ್ನುಡಿ' 'ಹೆದ್ದಾರಿ' ಮೊದಲಾದ ಪ್ರಯೋಗಗಳು ಬಂದಲ್ಲಿ 'ಕಾತರ' 'ನಾಣ್ನುಡಿ' 'ಹಿರಿಯದಾರಿ' ಹೀಗೆ ಬದಲಾಯಿಸಿಕೊಳ್ಳಬೇಕು. ಶೈಲಿಯ ದೋಷಗಳಲ್ಲಿ ಇವು ಎಣಿಸಲ್ಪಡಬಹುದಾದುದರಿಂದ ಕೆಲವನ್ನಿಲ್ಲಿ ಅವಶ್ಯವಾಗಿ ಹೇಳಬೇಕಾಗಿದೆ.

ಇಷ್ಟಾಗಿಯೂ ಈ ಗ್ರಂಥ ಅಧಿಕೃತವಾದದ್ದು ಎಂಬ ಹೆಮ್ಮೆಯಿಂದ ಇದನ್ನು ಬರೆದಿಲ್ಲ, ಅನೇಕ ಕನ್ನಡ ವಿದ್ಯಾರ್ಥಿಗಳಿಗೆ ಇಂತಹದೊಂದು ಗ್ರಂಥದ ಅವಶ್ಯಕತೆ ಬಹಳ ಎನಿಸಿದುದರಿಂದ ವಿದ್ಯಾರ್ಥಿಗಳ ಮನಃಸ್ಥಿತಿಯನ್ನರಿತ ಪ್ರಕೃತ ಗ್ರಂಥಕರ್ತನು ಇದನ್ನು ಬರೆದಿದ್ದಾನೆಂಬ ಮಾತನ್ನು ಸ್ಪಷ್ಟಪಡಿಸದೆ ಈ ಅರಿಕೆಯನ್ನು ಮುಗಿಸಲಾರೆ.

೨೫—೧—೪೦ ಬೆಳಗಾವೆ, ಎಸ್. ಕೆ. ಕುಲಕರ್ಣಿ

# ಪರಿವಿಡಿ

---

## ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪ | ೨೫ | ಬೆಳಕಿಗೆ | ಬೆಳಕಿಗೆತಂದ |
| ೧೫ | ೧೪ | ಹರಿಹರರಾಘವಾಂಕರು. | ರಾಘವಾಂಕರೇ. |
| ೨೭ | ೩ | ಬಡೆದ | ಒಡೆದ |
| ೫೧ | ೬ | ಲಾಲಿತ್ರ್ಯವೂ | ಲಾಲಿತ್ಯವೂ, |
| ೫೫ | ೧೭ | ರತ್ನಾಕರವರ್ಣ | ರತ್ನಾಕರವರ್ಣಿ |
| ೫೬ | ೧೪ | ನಾಯಕಿಯರು | ನಾಯಕರು |
| ೬೦ | ೧೦ | ಕಾವ್ಯದ ಕಥಾಸೂತ್ರ | ಕಾವ್ಯಕಥಾಸೂತ್ರ |
| ೬೨ | ೧೧ | ನೋಡಲಾತರೇ | ನೋಡಿರಲಾರರೇ |
| ” | ” | ವೇಣಿಸಂಹಾರ | ವೇಣೀಸಂಹಾರ |
| ೬೪ | ೨೬ | ನಾಟ್ಯಸಾಲೆ | ನಾಟ್ಯಶಾಲೆ |
| ೬೮ | ೧೧ | ತೃಷೆಯು | ತೃಷೆಯು |
| ೭೩ | ೯ | ತಲ್ಲಿನ | ತಲ್ಲೀನ |
| ೧೦೫ | ೪ | ಛಂದೋಬುಧಿ | ಛಂದೋಂಬುಧಿ |
| ೧೦೮ | ೧೩ | ಕವಿಜಿಹ್ವಾಬಂನ | ಕವಿಜಿಹ್ವಾಬಂಧನ |

# ೨. ಕನ್ನಡ ಸಾಹಿತ್ಯದ ಸ್ವರೂಪ

●

ಕನ್ನಡ ಸಾಹಿತ್ಯವಾಹಿನಿಯು ೧೫೦೦ ವರ್ಷಗಳಿಂದ ಶಾಖೋಪಶಾಖೆಗಳಿಂದ ಧೀರ ಗಂಭೀರವಾಗಿ ವಿರಾಟರೂಪವನ್ನು ತಾಳಿ ಪಂಡಿತರಿಗೂ ಪಾಮರರಿಗೂ ಆಶ್ಚರ್ಯವನ್ನುಂಟುಮಾಡುತ್ತ, ಕನ್ನಡರ ಕೀರ್ತಿಯನ್ನು ಹೆಮ್ಮೆಯಿಂದ ಹೊಗಳುತ್ತ ಹರಿಯುತ್ತಲಿದೆ.

ಸಾವಿರಾರು ಕವಿಗಳಿಂದಲೂ ಕವಿಯಿತ್ರಿಯರಿಂದಲೂ ತತ್ವಜ್ಞಾನಿಗಳಿಂದಲೂ ಶಾಸ್ತ್ರಪಂಡಿತರಿಂದಲೂ ಅನುಭಾವಿಗಳಿಂದಲೂ ಭಗವದ್ಭಕ್ತರಿಂದಲೂ ಶಿವಶರಣರಿಂದಲೂ ಹರಿದಾಸರಿಂದಲೂ ರಾಜರಿಂದಲೂ ರಂಕರಿಂದಲೂ ಒಕ್ಕಲಿಂದಲೂ ನಾವಿಕರಿಂದಲೂ ಬಹಳವೇಕೆ ದನಗಾಹಿಗಳಿಂದಲೂ ಕೂಡ ಪೋಷಿಸಲ್ಪಟ್ಟು ವಿವಿಧ ರೂಪಗಳಿಂದ ವಿಶ್ವತೋಮುಖವಾಗಿ ಹರಿಯುತ್ತಲಿದೆ.

ಪರ್ವತಪ್ರಾಯವಾದ ಕನ್ನಡದ ಹಿಂದಣ ಗ್ರಂಥರಾಶಿಯು ಆಶ್ಚರ್ಯವನ್ನುಂಟುಮಾಡುವುದು. ಏನೋ ಕಸದಂತೆ ಬೆಳೆದಿದೆ ಎನ್ನಬಹುದು. ಆದರೆ ಕನ್ನಡ ಸಾಹಿತ್ಯವನ್ನು ದಕ್ಷಿಣದೇಶದ ಯಾವುದೇ ಸಾಹಿತ್ಯದೊಡನೆ ಹೋಲಿಸಿದರೂ ಯಾವುದರಲ್ಲಿಯೂ ಹಿಂದೆ ಬೀಳಲಾರದು. ಶಾಸ್ತ್ರೀಯ ದೃಷ್ಟಿ, ಧ್ಯೇಯ, ಗಂಭೀರತೆ, ಲಾಲಿತ್ಯ, ಪ್ರೌಢತ್ವಗಳ ದೃಷ್ಟಿಯಿಂದ ವಿಚಾರಿಸಿದರೂ ಭಾರತೀಯ ಪ್ರೌಢಸಾಹಿತ್ಯಗಳ ಸಾಲಿನಲ್ಲಿಯೇ ಕನ್ನಡಕ್ಕೂ ಸ್ಥಾನವಿದೆ.

## ನಮ್ಮ ಸಾಹಿತ್ಯದ ದೃಷ್ಟಿ

ಕನ್ನಡ ಸಾಹಿತ್ಯದ ಧ್ಯೇಯವು ಜನಾಂಗಕ್ಕೆ ಸುಖಶಾಂತಿಗಳನ್ನೀಯುವದೇ; ಉದಾತ್ತ ಹಾಗು ಗಂಭೀರವಾದ ಮಾನವನ ಪ್ರಗತಿಯೇ

ನಮ್ಮ ಸಾಹಿತ್ಯದ ಧ್ಯೇಯ. ಕವಿರಾಜಮಾರ್ಗದ ಕರ್ತೃವಾದ ನೃಪತುಂಗನು ಸಾಹಿತ್ಯದ ಧ್ಯೇಯವನ್ನು ಈ ಬಗೆಯಾಗಿ ಬಣ್ಣಿಸಿದ್ದಾನೆ.

"ಅಧಿಕೃತ ಸತ್‌ಪುರುಷಾರ್ಥ- ।
ಪ್ರಧಾನ ಧರ್ಮಾರ್ಥ ಕಾಮಮೋಕ್ಷಂಗಳವಾ ॥
ಬುಧಜನ ವಿವಕ್ತ ಕಾವ್ಯ- ।
ಪ್ರಧಾರಿತಾರ್ಥಂಗಳಖಿಳ ಭುವನ ಹಿತಂಗಳ್ ॥"

—ಕವಿರಾಜಮಾರ್ಗ ೧-೨೦.

ಶೃಂಗಾರ ರಸಪ್ರಧಾನವಾದ ಕಾವ್ಯವನ್ನು ಒರೆಯಲು ಹೊರಟ **ರತ್ನಾಕರವರ್ಣಿಯು** ಕೂಡ **ಭರತೇಶವೈಭವದಲ್ಲಿ ಅಧ್ಯಾತ್ಮವೇ ನಿಚಿತ ಪ್ರಯೋಜನವೆನಗೆ** ಎಂದು ಮುಕ್ತಕಂಠದಿಂದ ಹೇಳಿರುವನು.

ಮಾನವನ ಚರಿತ್ರೆಯನ್ನೇ ಒರೆಯಲು ಹೊರಟ ಚೌಂಡರಸನು

ಸಕಲಾಂತರ್ಯಾಮಿ ಜೀವಪ್ರಕರ ವಿವಿಧ ಚೈತನ್ಯರೂಪಂ ಜಗದ್ವ್ಯಾ-
ಪಕ ಭಾವಂ ವಿಷ್ಣುವೆಂದಾಗಮತತಿ ಸತತಂ ಸಾರ್ವಸಂಬಂಧದಿಂ ಕೌ ।
ತುಕದಿಂದಾವುದಂ ಬಣ್ಣಿಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ- ।
ತ್ರಕಥಾವಿಸ್ತಾರಮಂ ಬಣ್ಣಿಸಲೊಡಂಬಡಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್ ॥

—ಅ. ದ. ಕು. ಚ. ೧ ೧೬.

ತಾನು ಬಣ್ಣಿಸುವುದೆಲ್ಲ, ಹಾಡುವುದೆಲ್ಲ ಶ್ರೀಹರಿಯ ಸ್ತೋತ್ರವೇ ಎಂದು ಅನುಸಂಧಾನ ಮಾಡಿದ್ದಾನೆ.

ಇವೆಲ್ಲ ಮಾತುಗಳಿಂದ ಕನ್ನಡ ಸಾಹಿತ್ಯದ ಸೃಷ್ಟಿಯು ಎಷ್ಟು ಆಧ್ಯಾತ್ಮಪ್ರೇರಿತವಾಗಿತ್ತೆಂಬುದು ವ್ಯಕ್ತವಾಗುವುದು.

## ಕನ್ನಡ ಸಾಹಿತ್ಯದ ವಿರಾಟರೂಪ

ಸುಪ್ರಸಿದ್ಧ ಕನ್ನಡ ವ್ಯಾಕರಣಕಾರನಾದ ಭಟ್ಟಾಕಳಂಕನು ಕನ್ನಡ ಸಾಹಿತ್ಯವನ್ನು ಕಂಡು ಬೆರಗಾಗಿದ್ದಾನೆ.

“ಶಬ್ದಾಗಮಯುಕ್ತ್ಯಾಗಮಪರಮಾಗಮವಿಷಯಾಣಾಂ ತಥಾ ಕಾವ್ಯನಾಟಕಾಲಂಕಾರ ಕಲಾಶಾಸ್ತ್ರ ವಿಷಯಾಣಾಂ ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್ ।”

—ಶಬ್ದಾನುಶಾಸನ.

ವ್ಯಾಕರಣ, ತರ್ಕ, ವೇದಾಂತ ಇವಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳೂ, ಕಾವ್ಯ, ನಾಟಕ, ಅಲಂಕಾರ, ಕಲೆ, ಶಾಸ್ತ್ರಗಳಿಗೆ ಸಂಬಂಧಿಸಿದ ಅಸಂಖ್ಯಾತ ಗ್ರಂಥಗಳೂ ಹುಟ್ಟಿವೆ ಎಂದು ಕನ್ನಡ ಸಾಹಿತ್ಯದ ವಿಪುಲತೆಯನ್ನೂ ಮೇಲ್ಮೆಯನ್ನೂ ಹೊಗಳಿದ್ದಾನೆ.

ಕನ್ನಡ ಸಾಹಿತ್ಯವನ್ನು ನಿರೀಕ್ಷಿಸಿದರೆ, ಸಕಲ ವರ್ಗದ ಸಾವಿರಾರು ಕವಿಗಳಿಂದ ಬರೆಯಲ್ಪಟ್ಟ ಪಂಪಭಾರತ, ಪಂಪರಾಮಾಯಣ, ಗದಾಯುದ್ಧ, ಕು. ವ್ಯಾ. ಭಾರತ, ಭಾಗವತ, ರಾಮಾಯಣ, ಪ್ರಭುಲಿಂಗಲೀಲೆ ಮೊದಲಾದ ಅನೇಕ ಪ್ರೌಢ ಚಂಪೂಕಾವ್ಯಗಳೂ ಕಾವ್ಯಗಳೂ ಮತಪ್ರಚಾರಕ ಚರಿತ್ರೆಗಳೂ ಪುರಾಣಗಳೂ **ಕಾವ್ಯಪ್ರಪಂಚದಲ್ಲಿ** ಕಾಣುತ್ತವೆ.

ಕರ್ಣಪಾರ್ಯನು ಬರೆದ ಮಾಳವೀಮಾಧವ ನಾಟಕ, ಕೇಶಿರಾಜನ ಸುಭದ್ರಾಹರಣ, ಪ್ರಬೋಧಚಂದ್ರ ನಾಟಕಗಳೂ ಸಿಂಗರಾರ್ಯನ **ರತ್ನಾವಳಿ** ನಾಟಕ ಇವೇ ಮೊದಲಾದ **ನಾಟಕಗ್ರಂಥ**ಗಳು ಕನ್ನಡದಲ್ಲಿ ಪ್ರಸಿದ್ಧವಾಗಿವೆ.

**ಅಲಂಕಾರಗ್ರಂಥ**ಗಳಲ್ಲಿ ನೃಪತುಂಗನ ಕವಿರಾಜಮಾರ್ಗವೇ ಪ್ರಾಚೀನ. ನಾಗವರ್ಮನ ಕಾವ್ಯಾವಲೋಕನದಲ್ಲಿ ಶಬ್ದಾರ್ಥಾಲಂಕಾರವೂ ಕವಿಸಮಯವೂ ಕವಿಕಾಮನ ಶೃಂಗಾರರತ್ನಾಕರ, ಸಾಳ್ವನ ರಸರತ್ನಾಕರ, ತಿಮ್ಮನ ನವರಸಾಲಂಕಾರ ಇವುಗಳಲ್ಲಿ ರಸಪ್ರಕ್ರಿಯೆಯೂ ಶಾರದಾವಿಲಾಸದಲ್ಲಿ ಧ್ವನಿಪ್ರಕ್ರಿಯೆಯೂ ಉಕ್ತವಾಗಿವೆ. ಇವಲ್ಲದೆ ಮಾಧವಾಲಂಕಾರ, ಅಪ್ರತಿಮ ವೀರಚರಿತ, ನರಪತಿವಿಜಯ ಎಂಬ ಲಕ್ಷಣಗ್ರಂಥಗಳೂ ಕರ್ನಾಟಕ ಕುವಲಯಾನಂದವೂ ಇನ್ನೂ ಬೇರೆ ಕೆಲವು ಗ್ರಂಥಗಳು ಇವೆ,

**ಛಂದಶ್ಶಾಸ್ತ್ರ**ದಲ್ಲಿ ಗುಣಗಾಂಕಿಯೇ ಬಹು ಪ್ರಾಚೀನ. ನಾಗವರ್ಮನ ಛಂದೋಂಬುಧಿಯಲ್ಲಿ ಛಂದಶ್ಶಾಸ್ತ್ರದ ಎಲ್ಲ ವಿಭಾಗಗಳೂ ಸಂಪೂರ್ಣವಾಗಿ ವಿವರಿಸಲ್ಪಟ್ಟಿವೆ. ಇದೇ ವಿಷಯವಾಗಿ ಕವಿಜಿಹ್ವಾಬಂಧನ, ಛಂದಸ್ಸಾರ ಎಂಬ ಗ್ರಂಥಗಳು ಪ್ರಸಿದ್ಧವಿರುವವಲ್ಲದೆ ಇನ್ನೂ ಕೆಲವು ಗ್ರಂಥಗಳಿವೆ.

**ವ್ಯಾಕರಣ**ಗ್ರಂಥಗಳಲ್ಲಿ ನಯಸೇನನದೇ ಹಳೆಯದು. ಶಬ್ದಸ್ಮೃತಿ, ಶಬ್ದಮಣಿದರ್ಪಣ ಇವೆರಡು ಕನ್ನಡಭಾಷೆಯಲ್ಲಿಯೂ ಭಾಷಾಭೂಷಣ, ಶಬ್ದಾನುಶಾಸನಗಳು ಸಂಸ್ಕೃತದಲ್ಲಿಯೂ ಇವೆ.

**ನಿಘಂಟು**ಗಳಲ್ಲಿ ರನ್ನಕಂದವೇ ಬಹು ಹಿಂದಿನದು. ಶಬ್ದಸಾರ, ಕರ್ನಾಟಕ ನಿಘಂಟು, ಚತುರಾಸ್ಯ ನಿಘಂಟು, ಕರ್ನಾಟಕ ಶಬ್ದಮಂಜರಿ, ಕಬ್ಬಿಗರ ಕೈಪಿಡಿ, ಕವಿಕಂಠಹಾರ, ಕರ್ನಾಟಕ ಸಂಜೀವನ, ಮೊದಲಾದುವು ಹಳಗನ್ನಡ ಪದಗಳನ್ನು ವಿವರಿಸುತ್ತವೆ. ವಸ್ತುಕೋಶ, ಮಂಗಾಭಿಧಾನ, ನಾನಾರ್ಥರತ್ನಾಕರ ಮೊದಲಾದುವು ಸಂಸ್ಕೃತ ಶಬ್ದಗಳಿಗೆ ಕನ್ನಡದ ಪ್ರತಿಪದಗಳನ್ನು ಕೊಡುತ್ತವೆ. ಇವಲ್ಲದೆ ಅಮರಹಲಾಯುಧ ಮೊದಲಾದ ಸಂಸ್ಕೃತ ಕೋಶಗಳಿಗೆ ಟೀಕೆಗಳೂ ವೈದ್ಯನಿಘಂಟುಗಳಿಗೆ ಟೀಕೆಗಳೂ ದೊರೆಯುತ್ತವೆ.

**ವೈದ್ಯಶಾಸ್ತ್ರ**ದಲ್ಲಿ ಜಗದ್ದಳ ಸೋಮನಾಥ ಕೃತವಾದ ಕರ್ನಾಟಕ ಕಲ್ಯಾಣಕಾರಕವೇ ಪ್ರಾಚೀನವಾದುದು. ಖಗೇಂದ್ರಮಣಿದರ್ಪಣದಲ್ಲಿ ವಿಷವೈದ್ಯವು ವಿಸ್ತೃತ ವರ್ಣಿಸಲ್ಪಟ್ಟಿದೆ. ಅಲ್ಲದೆ ಶ್ರೀಧರದೇವ, ಸಾಳ್ವ, ಚಿಕುಪಾಧ್ಯಾಯ, ವೀರರಾಜ, ನಂಜರಾಜ, ನೃಸಿಂಹಭಟ್ಟ, ಬ್ರಹ್ಮ ಮೊದಲಾದವರು ಹಲವು ವೈದ್ಯಕ ಗ್ರಂಥಗಳನ್ನು ಬರೆದಿದ್ದಾರೆ. ವ್ರಣವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ, ಇವುಗಳ ವಿಷಯವಾಗಿಯೂ ಗ್ರಂಥಗಳು ಹುಟ್ಟಿವೆ. ಚಂದ್ರರಾಜ, ಅಭಿನವಚಂದ್ರ, ರಾಮಚಂದ್ರ, ಪದ್ಮಣಪಂಡಿತ, ಮೊದಲಾದವರು ಅಶ್ವವೈದ್ಯವನ್ನೂ ಚಾಲುಕ್ಯರಾಜನಾದ ಕೀರ್ತಿವರ್ಮನು ಗೋವೈದ್ಯವನ್ನೂ ವೀರಭದ್ರರಾಜನು ಪಾಲಕಾಪ್ಯಕೃತ ಹಸ್ತ್ಯಾಯುರ್ವೇದಕ್ಕೆ ಟೀಕೆಯನ್ನೂ ಬರೆದಿದ್ದಾರೆ.

**ಪಾಕಶಾಸ್ತ್ರ**ದಲ್ಲಿ ಜಯಬಂಧು ನಂದನನ ಗ್ರಂಥವೇ ಹಳೆಯದು. ಮಂಗರಸ ಮುಂತಾದವರು ರಚಿಸಿದ ಗ್ರಂಥಗಳೂ ಇವೆ.

**ಜ್ಯೋತಿಶಾಸ್ತ್ರ**ದಲ್ಲಿ ಶ್ರೀಧರಾಚಾರ್ಯ ಕೃತ ಜಾತಕತಿಲಕವೇ ಪ್ರಾಚೀನ. ಲೋಕೋಪಕಾರ, ರಟ್ಟಮತ, ರಟ್ಟನ ಜಾತಕ, ನರಪಿಂಗಲಿ, ಮಾರ್ಕಂಡೇಯ ಪುರಾಣ, ಶಕುನಪ್ರಪಂಚ, ಮೊದಲಾದ ಜ್ಯೋತಿಷ ಗ್ರಂಥಗಳೂ ಸೂರ್ಯಸಿದ್ಧಾಂತವೇ ಮೊದಲಾದ ಕೆಲವು ಸಂಸ್ಕೃತ ಗ್ರಂಥಗಳ ಟೀಕೆಗಳೂ ದೊರೆಯುತ್ತವೆ.

**ಗಣಿತಶಾಸ್ತ್ರ**ದಲ್ಲಿ ವ್ಯವಹಾರಗಣಿತ, ಕ್ಷೇತ್ರಗಣಿತ, ಬೀಜಗಣಿತ ಮೊದಲಾದ ಗ್ರಂಥಗಳೂ ಕೆಲವು ಸಂಸ್ಕೃತ ಗ್ರಂಥಗಳ ಟೀಕೆಗಳೂ ಇವೆ.

**ಕಾಮಶಾಸ್ತ್ರ**ದಲ್ಲಿ ಮದನತಿಲಕವೇ ಪ್ರಾಚೀನ. ಇದಲ್ಲದೆ ಸ್ಮರತಂತ್ರ, ಮನ್ಮಥವಿಜಯ, ಜನವಶ್ಯ, ಮೊದಲಾದ ಗ್ರಂಥಗಳೂ ವಾತ್ಸ್ಯಾಯನ ಕೊಕ್ಕೋಕ ಮೊದಲಾದ ಗ್ರಂಥಗಳ ಟೀಕೆಗಳೂ ಇವೆ.

ಇವುಗಳಲ್ಲದೆ **ಸ್ವರಶಾಸ್ತ್ರ, ರತ್ನಶಾಸ್ತ್ರ, ಸಾಮುದ್ರಿಕಶಾಸ್ತ್ರ, ಬಾಣಗಾರಿಕೆ,** ಮೊದಲಾದವುಗಳ ವಿಷಯವಾಗಿಯೂ ಗ್ರಂಥಗಳು ಹುಟ್ಟಿವೆ.

ರಾಜನೃಪವಿಜಯ, ಕಂಠೀರವನರಸರಾಜವಿಜಯ, ಚಿಕ್ಕದೇವರಾಜ ವಿಜಯ, ಮುಂತಾದ ಜೀವನಚರಿತೆಗಳೂ, ಮೈಸೂರರಸುಗಳ ಪೂರ್ವಾಭ್ಯುದಯ, ಕೆಳದಿ ನೃಪವಿಜಯ, ಬಿಳಗಿಯರಸರ ವಂಶಾವಳಿ ಮೊದಲಾದ ಗ್ರಂಥಗಳೂ ಇವೆ.

ಅಲ್ಲದೆ ಸುಂದರವಾದ ಪ್ರೌಢವಾದ ಕಾವ್ಯಸರಣಿಯಲ್ಲಿ ಉದ್ದಾಮ ಕವಿಗಳಿಂದ ರಚಿಸಲ್ಪಟ್ಟ ಅನೇಕ ಕನ್ನಡ ಶಾಸನಗಳು ದೊರೆಯುತ್ತವೆ. ಇವು ೭ನೆಯ ಶತಮಾನದಿಂದ ೧೭ನೆಯ ಶತಮಾನದ ವರೆಗೆ, ಬೇರೆ ಬೇರೆ ಕಾಲದಲ್ಲಿ ಹುಟ್ಟಿವೆ. ಇವುಗಳಲ್ಲಿ ಹಲವು ಗ್ರಂಥಗಳೆಂದು ಪರಿಗಣಿಸುವಷ್ಟು ಪ್ರೌಢವಾಗಿವೆ.

ಇವೆಲ್ಲ ಸಂಗತಿಗಳು ಕನ್ನಡ ಸಾಹಿತ್ಯದ ವಿವಿಧತೆಯನ್ನೂ ವಿರಾಟ ರೂಪವನ್ನೂ ವ್ಯಕ್ತಪಡಿಸುತ್ತವೆ.

## ಕನ್ನಡಭಾಷೆಯ ಅವಸ್ಥಾಭೇದಗಳು

ಪ್ರವಾಹದ ನೀರಿನಂತೆ, ನಿರಂತರವೂ ವ್ಯತ್ಯಾಸವನ್ನು ಹೊಂದುವುದೇ ವ್ಯಾವಹಾರಿಕ ಅಥವಾ ಜೀವಂತ ಭಾಷೆಯ ನೈಸರ್ಗಿಕ ಲಕ್ಷಣವು. ಈ ವ್ಯತ್ಯಾಸಗಳು ಉದ್ದೇಶಪೂರ್ವಕವಾದವುಗಳಲ್ಲ. ಒಮ್ಮೆಲೆ ಇವು ಕಾಣಿಸಿಕೊಳ್ಳುವುದೂ ಇಲ್ಲ. ಆದರೆ ಅವ್ಯಕ್ತವಾಗಿ, ಪರಿಸ್ಥಿತಿಯ ಮೂಲಕ ಸಂಭವಿಸುವ ವ್ಯತ್ಯಾಸಗಳು ಬೆಳೆದು ವ್ಯಕ್ತವಾಗಿ ರೂಪುಗೊಂಡು ಕಾಣಿಸಿಕೊಳ್ಳುತ್ತವೆ. ಆಗ ಭಾಷೆಯು ಒಂದು ಮಟ್ಟಕ್ಕೆ ಬಂದಿತೆಂದು ಹೇಳಬಹುದು. ಹೀಗೆ ಕ್ರಮಕ್ರಮವಾಗಿ ಭಾಷೆಯು ಬೆಳೆದು ಅನೇಕ ಸ್ಥಿತ್ಯಂತರಗಳನ್ನು ಹೊಂದುತ್ತಿರುತ್ತದೆ. ಭಾಷೆಯ ಈ ಅವಸ್ಥಾಭೇದಗಳನ್ನು ತಿಳಿಸಿಕೊಡುವುದೇ **ಭಾಷಾಚರಿತೆಯ ಉದ್ದೇಶ.** ಕನ್ನಡ ಭಾಷೆಯೂ ಕಾಲಕ್ರಮದಲ್ಲಿ ಹೀಗೆಯೇ ಮಾರ್ಪಟ್ಟಿದೆ. ಹೊಸ ಕನ್ನಡಿಗರು ಅಭ್ಯಾಸ ಮಾಡದೆ ಹೋದರೆ ಹಳಗನ್ನಡದ ಪ್ರಾಚೀನ ಶಾಸನಗಳನ್ನೂ ಗ್ರಂಥಗಳನ್ನೂ ಓದಿ ಅರ್ಥಮಾಡಿಕೊಳ್ಳುವುದೇ ಕಷ್ಟವಾಗುತ್ತದೆ. ಭಾಷೆಯು ಕಾಲಕ್ರಮದಲ್ಲಿ ಇಷ್ಟು ವ್ಯತ್ಯಾಸವನ್ನು ಹೊಂದುತ್ತಾ ಬಂದಿದೆ.

ಅಪಾರವಾದ ಕನ್ನಡ ಸಾಹಿತ್ಯಸಾಗರದಲ್ಲಿ ಮುಳುಗಿ ಅದರ ನೆಲೆಯನ್ನು ಕಂಡುಹಿಡಿಯಲು ಅನೇಕ ವಿದ್ವಾಂಸರು ಯತ್ನಿಸಿದ್ದಾರೆ, ಯತ್ನಿಸುತ್ತಿದ್ದಾರೆ. ಕವಿಚರಿತೆಕಾರರಾದ ಶ್ರೀ. ಆರ್. ನರಸಿಂಹಾಚಾರ್ಯರೂ, ರೈಸ್ ಮತ್ತು ಕಿಟಲಸಾಹೇಬರೂ, ಶ್ರೀ. ಟಿ. ಟಿ. ಶರ್ಮ ಮೊದಲಾದವರು ಬೇರೆ ಬೇರೆ ಕಾಲಗಳಲ್ಲಿ ಕಂಡುಬರುವ ಭಾಷೆಯ ವೈಲಕ್ಷಣ್ಯಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡ ಭಾಷೆಗೆ ಎಷ್ಟು ಅವಸ್ಥೆಗಳಿವೆ ಎಂಬುದನ್ನು ನಿರ್ಣಯಿಸಲು ಯತ್ನಿಸಿದ್ದಾರೆ.

ಇವರ ನಿರ್ಧಾರಗಳನ್ನು ನೋಡಿದರೆ, ಇಬ್ಬಗೆಯಾಗಿ ಕನ್ನಡ ಸಾಹಿತ್ಯದ ಕಡೆಗೆ ನೋಡುವರೆಂದು ಕಂಡುಬರುತ್ತದೆ. ಸಾಹಿತ್ಯದ ಆಂತರಿಕಶಕ್ತಿ ಮೊದಲನೆಯದು, ಬಾಹ್ಯಲಕ್ಷಣಗಳು ಎರಡನೆಯದು.

**ಕವಿಚರಿತೆಕಾರರು**—ಅಂತಃಶಕ್ತಿಯೇ ಸಾಹಿತ್ಯದ ಜೀವನ. ನಮ್ಮ ಸಾಹಿತ್ಯವೆಲ್ಲವೂ ಒಂದಿಲ್ಲೊಂದು ರೀತಿಯಿಂದ ಮತಗಳ ಸ್ಫೂರ್ತಿಯನ್ನೇ ವ್ಯಕ್ತಗೊಳಿಸುವುದರಿಂದ, ಮತದೃಷ್ಟಿಯಿಂದ ಅದನ್ನು ವಿಭಾಗಿಸುವುದು ಅಯುಕ್ತವೆನಿಸಲಾರದು. ಆದುದರಿಂದ ಕನ್ನಡ ಸಾಹಿತ್ಯದಲ್ಲಿ ಸ್ಥೂಲವಾಗಿ ಜೈನಯುಗ, ವೀರಶೈವಯುಗ, ವೈಷ್ಣವಯುಗ ಎಂಬ ಮೂರು ಭಾಗಗಳನ್ನು ಕವಿಚರಿತೆಕಾರರು ಕಲ್ಪಿಸಿದ್ದಾರೆ.

**ಜೈನಯುಗ** (೫ನೆಯದರಿಂದ ೧೨ನೆಯ ಶತಮಾನದ ಮಧ್ಯದ ವರೆಗೆ):—ಈ ಕಾಲದಲ್ಲಿ ಹೆಚ್ಚಾಗಿ ಜೈನರಿಂದಲೇ ಕಾವ್ಯಗಳು ಬರೆಯಲ್ಪಟ್ಟಿವೆ. ಚಂಪೂಕಾವ್ಯವೇ ಈ ಯುಗದ ಲಕ್ಷಣ. ಪಂಪ, ಪೊನ್ನ, ರನ್ನ ಮೊದಲಾದವರೇ ಶ್ರೇಷ್ಠ ಕವಿಗಳು.

**ವೀರಶೈವಯುಗ** ( ೧೨-೧೫ನೆಯ ಶತಮಾನದ ವರೆಗೆ ) :—ವಚನ, ತ್ರಿಪದಿ, ರಗಳೆ, ಷಟ್ಪದಿಗಳೇ ಈ ಯುಗದ ಮುಖ್ಯ ಲಕ್ಷಣಗಳು. ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದವರೇ ಶ್ರೇಷ್ಠ ವಚನಕಾರರು; ಹರಿಹರ ರಾಘವಾಂಕರೇ ಷಟ್ಪದಿಕಾರರು.

**ವೈಷ್ಣವ (ಬ್ರಾಹ್ಮಣ) ಯುಗ** ( ೧೫–೧೯ನೆಯ ಶತಮಾನದ ವರೆಗೆ):—ಷಟ್ಪದಿ, ಪದ ಸುಳಾದಿಗಳೇ ಈ ಯುಗದ ಲಕ್ಷಣ. ಪುರಂದರ ದಾಸ ಕನಕದಾಸರೇ ಮೊದಲಾದವರು ಶ್ರೇಷ್ಠ ಕೀರ್ತನಕಾರರು. ಕುಮಾರವ್ಯಾಸ ಮೊದಲಾದವರೇ ಕವಿಗಳು.

ಈ ಜಾತಿಯ ದೃಷ್ಟಿಯಿಂದಲೇ ಸಾಹಿತ್ಯವನ್ನು ನೋಡುವ ಪ್ರವೃತ್ತಿಯನ್ನು ಈಗಣ ಕೆಲ ಸಾಹಿತಿಗಳಲ್ಲಿಯೂ ಕಾಣುತ್ತೇವೆ.

ಆದರೆ ಇ. ಪಿ. ರೈಸರು ಈ ದೃಷ್ಟಿಯನ್ನು ಅಲ್ಲಗಳೆದಿದ್ದಾರೆ. ನಾವು ಜಾತಿ ಮತಗಳ ಕಡೆಗೆ ದೃಷ್ಟಿ ಕೊಡದೆ, ಸಾಹಿತ್ಯೈಕದೃಷ್ಟಿಯಿಂದ ಎಲ್ಲ ಸಾಹಿತ್ಯವನ್ನು ನೋಡಬೇಕೆಂಬೇ ಅವರ ಅಭಿಪ್ರಾಯ. ಅದೇ ಸರಿ ಎಂದು ಎಲ್ಲರಿಗೂ ಅನಿಸದಿರಲಾರದು.

ಈ ದೃಷ್ಟಿಯಲ್ಲಿ ಅನೇಕ ದೋಷಗಳಿವೆ. ಅವುಗಳನ್ನು ಹೀಗೆ ಹೇಳಬಹುದು.

(೧) ಜೈನಯುಗಕ್ಕಿಂತ ಮುಂಚಿತವಾಗಿಯೂ ಜೈನ ಕವಿಗಳಿದ್ದರು. (೨) ಜೈನ, ವೀರಶೈವ, ಬ್ರಾಹ್ಮಣ ಯುಗಗಳಲ್ಲಿ ಆಯಾ ಮತಕ್ಕೆ ಸಂಬಂಧಪಡದ ಗ್ರಂಥಗಳೂ ಹುಟ್ಟಿವೆ. (೩) ಜೈನಯುಗದಲ್ಲಿ ಬ್ರಾಹ್ಮಣ ಕವಿಗಳೂ ವೀರಶೈವ ಯುಗದಲ್ಲಿ ಹೆಚ್ಚಾಗಿ ಜೈನ ಕವಿಗಳೂ ಬ್ರಾಹ್ಮಣ ಯುಗದಲ್ಲಿ ಜೈನ ಕವಿಗಳೂ ಇರುವರು. (೪) ಜೈನಯುಗದಲ್ಲಿದ್ದ ಚಂಪೂ ಗ್ರಂಥಗಳು ಜೈನಯುಗಕ್ಕೆ ನಿಲ್ಲಲಿಲ್ಲ. ಅಲ್ಲದೆ ಜೈನರು ಬೇರೆ ಬೇರೆ ಯುಗಗಳಲ್ಲಿ ಬರೆದಾಗ ಆಯಾ ಕಾಲಕ್ಕೆ ತಕ್ಕಂತೆ, ಷಟ್ಪದಿ ಸಾಂಗತ್ಯ ಗಳಲ್ಲಿಯೂ ಬರೆದರು. ಆದ್ದರಿಂದ ಆ ಯುಗಧರ್ಮವೇ ಮತಧರ್ಮ ಕ್ಕಿಂತ ಹೆಚ್ಚಿನದು. (೫) ಮತದ ಪುಸ್ತಕಗಳಲ್ಲದೆ ಸರ್ವಸಮ್ಮತವಾದ ಕಾವ್ಯರಾಶಿಯೇ ಹೆಚ್ಚು.

ಆಚಾರ್ಯರ ಈ ವಿಭಜನೆಯಲ್ಲಿ ರೈಸಸಾಹೇಬರು ಒಂದು ಬೆಲೆ ಯುಳ್ಳ ಮಾತನ್ನು ಹೇಳಿದ್ದಾರೆ. 'ನಮ್ಮ ಸಾಹಿತ್ಯವು ವಿಶಾಲಪ್ರವಾಹ ವಿದ್ದಂತೆ, ಅದು ಮುಂದೆ ಮುಂದೆ ಹರಿದಂತೆ, ಅನೇಕ ಶಾಖೋಪಶಾಖೆ ಗಳು ಅದಕ್ಕೆ ಕೂಡುತ್ತವೆ. ಶುದ್ಧ ಜೈನಸಾಹಿತ್ಯಪ್ರವಾಹಕ್ಕೆ ವೀರಶೈವ ಪ್ರವಾಹದ ಜೋಡು ಉಂಟಾಗಿ ಎರಡೂ ಬದಿ ಬದಿಗೆ ಹರಿಯುವಾಗ ವೈಷ್ಣವಪ್ರವಾಹವೂ ಅದರಲ್ಲಿ ಕೂಡಿ **ತ್ರಿವೇಣಿಸಂಗಮವಾಗಿ** ವಿಸ್ತೃತ ವಾಯಿತು, ಎಂದಿದ್ದಾರೆ.

**ಶ್ರೀ. ಟಿ. ಟಿ. ಶರ್ಮರ (ಕನ್ನಡವಕ್ಕಿ) ಅಭಿಪ್ರಾಯ:—** ನಮ್ಮ ಸಾಹಿತ್ಯವನ್ನು ಮತದೃಷ್ಟಿಯಿಂದ ವಿಭಜಿಸುವುದು, ಶುದ್ಧಸಾಹಿತ್ಯ ದೃಷ್ಟಿಯಿಂದ ಸಮಂಜಸವಾದುದಲ್ಲ. ಕಾಲ ದೇಶಗಳನ್ನು ಲೆಕ್ಕಿಸಿ ಕವಿಯ ಕರ್ಮಕ್ಕೆ ಮೂಲಕಾರಣವಾದ ಸ್ಫೂರ್ತಿವಿಶೇಷವನ್ನು ಗಮನಿಸಿ ಕಾವ್ಯಕ್ಕೆ ರಸವೇ ಆತ್ಮವೆಂದರಿತು ಕನ್ನಡ ಸಾಹಿತ್ಯವನ್ನು **ಕ್ಷಾತ್ರಯುಗ, ಮತಪ್ರಚಾರಕಯುಗ, ಸಾರ್ವಜನಿಕಯುಗ, ಮತ್ತು ಆಧುನಿಕ ಯುಗ** ಎಂದು ವಿಭಾಗಿಸಬೇಕೆಂದು ಅವರ ಮತ.

**ಕ್ಷಾತ್ರಯುಗ** (೬ರಿಂದ ೧೦ನೆಯ ಶತಮಾನ):—ಈ ಯುಗದಲ್ಲಿ ಗಂಗ ಮತ್ತು ರಾಷ್ಟ್ರಕೂಟ, ಪಲ್ಲವ ಹಾಗು ಚೋಳರಲ್ಲಿ ಸಾಮ್ರಾಜ್ಯಾ ಧಿಪತ್ಯಕ್ಕಾಗಿ ಪರಸ್ಪರ ಸ್ಪರ್ಧೆ ಕಂಡುಬರುತ್ತದೆ. ಅಂತೇ ಈ ಯುಗವು

ವೀರರಸ ಪ್ರಧಾನವಾದದ್ದು. ಕಾಲದ ಕನ್ನಡಿಯಂತಿದ್ದ **ಪಂಪ, ರನ್ನರ** ಕಾವ್ಯಗಳೇ ಇದಕ್ಕೆ ಸಾಕ್ಷಿ.

**ಮತಪ್ರಚಾರಕಯುಗ** (೧೨-೧೬ನೆಯ ಶತಮಾನ):—ನಾಸ್ತಿಕ ಮತವಾದ ಜೈನಮತಕ್ಕೆ ಆಸ್ತಿಕವೈದಿಕಮತವು ವಿರೋಧಿಸಿತು. ಮುಂದೆ ರಾಮಾನುಜ, ಬಸವ, ಮಧ್ವರಿಂದ ಮತವಿಪ್ಲವಗಳಾದವು. ಅದರ ಪರಿಣಾಮವು ಅನ್ಯೋನ್ಯ ಮತಾವಹೇಳನದಲ್ಲಿ ಕೊನೆಗೊಂಡಿತು. ಈ ಯುಗದ ಮುಖ್ಯ ಲಕ್ಷಣ, **ವಚನಶಾಸ್ತ್ರವೇ** ಮೊದಲಾದ ಮತಗ್ರಂಥಗಳು, **ಕೀರ್ತನೆಗಳು** ಇತ್ಯಾದಿ.

**ಸಾರ್ವಜನಿಕಯುಗ** (೧೬ ೧೯ನೆಯ ಶತಮಾನದ ವರೆಗೆ).—ವಿಜಯನಗರದ ಮೇಲೆ ಮುಸಲ್ಮಾನರು ದಾಳಿಯಿಟ್ಟು ಹಾವಳಿಯನ್ನು ಮಾಡಿದರು. ಅರಾಜಕತೆಯೂ ನೆಲೆಗೊಂಡಿತು. ಅನೈತಿಕ ವ್ಯಾಧಿಯೂ ಹಬ್ಬಿ ಸಾಮಾಜಿಕ ಜೀವನವು ನಿರ್ಬಲವಾಯಿತು. ಧಾರ್ಮಿಕ ಕ್ಷೇತ್ರದಲ್ಲಿ ತಿರುಳನ್ನರಿಯದ ಡಾಂಭಿಕರ ಗೊಂದಲ, ಹೀಗೆ ಸಮಾಜವು ಅಧಃಪತನವನ್ನೈದಿತು. ಇದೊಂದು **ಹಾಡುಗಬ್ಬಗಳ** ಕಾಲ. ಸಾಂಗತ್ಯ, ರಗಳೆ, ತ್ರಿಪದಿ, ಯಕ್ಷಗಾನಗಳು ಬೆಳಕಿಗೆ ಬಂದುವು. ಸುಲಭತೆಯೇ (ಸುಲಭಜೀವನ) ಈ ಯುಗದ ಲಕ್ಷಣ.

ಶ್ರೀಮಾನ್ **ಟಿ. ಟಿ. ಶರ್ಮರ** ಮೊದಲನೆಯ ವಿಭಾಗವು ಕೆಲಮಟ್ಟಿಗೆ ಯೋಗ್ಯವೆನಿಸಿದರೂ, ಅದೇ ಕಾಲಕ್ಕೆ ಆಯಾ ಜೈನಕವಿಗಳಿಂದ ಪುರಾಣಗ್ರಂಥಗಳೂ ಮತಪ್ರಕ್ರಿಯೆಗಳೂ ಬರೆಯಲ್ಪಟ್ಟಿವೆಯೆಂಬುದನ್ನು ಮರೆಯಲಾಗುವುದಿಲ್ಲ. ಇನ್ನು ಎರಡನೆಯ ಮಾತು, ಅವರ ತತ್ವಕ್ಕೇ ವಿರೋಧವಾಗುತ್ತದೆ. ಸಾಹಿತ್ಯದ ಸ್ಫೂರ್ತಿವಿಶೇಷದ ಮೇಲೆ ವಿಭಾಗಿಸಬೇಕೆಂಬ ರಸದೃಷ್ಟಿಯು ಒಮ್ಮೆಲೆ, ಮತದ ಕಡೆಗೆ ಹೊರಳಿಬಿಟ್ಟಿದೆ. ಸಾಮಾಜಿಕಯುಗದಲ್ಲಿ **ದಾಸರ ಸಾಹಿತ್ಯವು** ಜನತೆಯಲ್ಲೆಲ್ಲ ಹರಡಿತ್ತೆಂಬ ವಿಷಯವು ಮಾತ್ರ ನಿಜ.

ಹೀಗೆ ರಸ, ಸ್ಫೂರ್ತಿಗಳಿಂದ ನಮ್ಮ ಭಾಷೆಯ ಅವಸ್ಥಾಭೇದಗಳನ್ನು ತಿಳಿಯಲು ಆತಂಕಗಳಿದ್ದುದರಿಂದ ಹಲವರು ಸಾಹಿತ್ಯದ ಬಾಹ್ಯ ಲಕ್ಷಣಗಳಿಂದ ಭಾಷೆಯ ಸ್ಥಿತ್ಯಂತರಗಳನ್ನು ಊಹಿಸುತ್ತಾರೆ.

ರೈಸರು, ಕನ್ನಡಕ್ಕೆ **ಪೂರ್ವದಹಳಗನ್ನಡ, ಹಳಗನ್ನಡ, ಹೊಸಗನ್ನಡ**ವೆಂದು ಮೂರು ರೂಪಗಳನ್ನು ಹೇಳುತ್ತಾರೆ. **ಪೂರ್ವದ ಹಳಗನ್ನಡ**ವು ಕ್ರಿ.ಶ.೭ನೆಯ ಶತಮಾನದ ಅಂತ್ಯದವರೆಗೂ, ಹಳಗನ್ನಡವು ಅಲ್ಲಿಂದ ೧೪ನೆಯ ಶತಮಾನದವರೆಗೂ, ಹೊಸಗನ್ನಡವು ಅಲ್ಲಿಂದ ಈಚೆಗೂ ಎಂದು ಅವರ ಮತ. ಕವಿಚರಿತೆಕಾರರೂ ಇದೇ ಅಭಿಪ್ರಾಯದವರು.

ಕಿಟಲ್‌ಸಾಹೇಬರು ಕನ್ನಡಭಾಷೆಗೆ, **ಹಳಗನ್ನಡ, ಮಧ್ಯಕಾಲದ ಕನ್ನಡ, ಹೊಸಗನ್ನಡ** ಎಂಬ ಮೂರು ಅವಸ್ಥೆಗಳಿವೆಯೆಂದೂ ಕ್ರಿ. ಶ. ೬ನೆಯ ಶತಮಾನದಿಂದ, ೧೨೫೦ರ ವರೆಗೆ ಹಳಗನ್ನಡವೂ ೧೨೫೦ರಿಂದ ೧೫೦೦ರ ವರೆಗೆ, ಮಧ್ಯಕಾಲದ ಕನ್ನಡವೆಂದೂ ಅಲ್ಲಿಂದೀಚೆಗೆ ಹೊಸ ಗನ್ನಡವು ಪ್ರಚಾರದಲ್ಲಿದೆಯೆಂದೂ ಹೇಳುತ್ತಾರೆ.

ಪೂರ್ವದ ಹಳಗನ್ನಡ ಕಾಲವೆಂದು ಹೇಳುವುದರಲ್ಲಿ ಈ ಇಬ್ಬರು ಸಾಹೇಬರಲ್ಲಿಯೂ ಮತಭೇದವಿದೆ.

## ರೈಸಸಾಹೇಬರ ಕಾರಣಗಳು

೧. ಕವಿರಾಜಮಾರ್ಗದಲ್ಲಿ ತನ್ನ ಹಿಂದಿನ ಭಾಷೆಯು ಪಳಗನ್ನಡ ವೆಂದು ಹೇಳಿದೆ. ಇದೇ **ಪೂರ್ವದ ಹಳಗನ್ನಡ**.

೨. ಒಂಬತ್ತನೆಯ ಶತಮಾನದಲ್ಲಿ, ಇಲ್ಲದ ಭಾಷಾವೈಲಕ್ಷಣ್ಯಗಳು ಹಿಂದೆ ಕಂಡುಬರುತ್ತವೆ. ಎಂದರೆ ಹಳಗನ್ನಡ ವ್ಯಾಕರಣದಿಂದ ಸಿದ್ಧಿಸದ ಕೆಲವು ಪ್ರಯೋಗಗಳುಂಟು.

ಇದಕ್ಕೆ ಉದಾಹರಣೆಯಾಗಿ, ದ್ವಿತಿಯಾವಿಭಕ್ತಿಯ ಪ್ರತ್ಯಯ.

ಪೂರ್ವದ ಹಳಗನ್ನಡ 'ಅನ್, ಹಳಗನ್ನಡ' ಅನ್.

ಉ:- ಪ್ರಾಸಾದಾಂತರ**ಮಾನ್**, ಮಿಕ್ಕು**ದಾನ್**, ಇದರಂತೆ ಷಷ್ಠಿ, ಸಪ್ತಮಿ ಪ್ರತ್ಯಯಗಳನ್ನು ಉದಾಹರಿಸುತ್ತಾರೆ.

## ಇದಕ್ಕೆ ವಿರೋಧವಾದ ಅಂಶಗಳು

೧. ಕವಿರಾಜಮಾರ್ಗದಲ್ಲಿ ಉಲ್ಲೇಖಿತವಾದ 'ಪಳಗನ್ನಡ' ಎಂಬ ಮಾತಿನ ಅರ್ಥವು ಹಿಂದಿನ ಭಾಷೆ, ಈಗಿನಿಂದ ಭಿನ್ನವಾದುದು ಎಂದಿರದೆ,

'ವೇದ' ಎಂಬುದಕ್ಕೆ ಪ್ರತಿಪಾದಿತವಾದ 'ಪಟಿನಾತು' ಎಂಬ ಮಾತಿನಲ್ಲಿ ಪಟಿ ಶಬ್ದಕ್ಕೆ ಇರುವ ಅರ್ಥವೇ. ಎಂದರೆ ಬಹುಕಾಲದಿಂದಿರುವ,- ಪುರಾತನವಾದ, ಎಂಬ ಅರ್ಥವು 'ಪಟಿಗನ್ನಡ'ಕ್ಕೆ ಇರುತ್ತದೆಂದು ಹೇಳಬಹುದು.

೨. ಎಂಟನೆಯ ಶತಮಾನದ ಹಿಂದಿನ ಕನ್ನಡದಲ್ಲಿ, ಹಳಗನ್ನಡದಿಂದ ಭಿನ್ನವಾದ ರೂಪಗಳಿರುವುದು ನಿಜ ಆದರೆ ಹಳಗನ್ನಡದ ರೂಪಗಳೂ ಇವೆ. ಇಷ್ಟೇ ಅಲ್ಲ, ಇವೇ ಹೆಚ್ಚು.

೩. ಮೂರನೆಯ ಮಾತೆಂದರೆ, ಈ ರೂಪಗಳ ವಿಷಯ. ಉದಾಹರಣೆಗೆ **ಆನ್**, ಪ್ರತ್ಯಯವನ್ನೇ ತೆಗೆದುಕೊಳ್ಳೋಣ. ರೈಸಸಾಹೇಬರ ಮತದಂತೆ ಇದು ಹಳಗನ್ನಡದ **ಅನ್**, ಪ್ರತ್ಯಯದ ಪೂರ್ವರೂಪ. ಕ್ರಿಯಾಪದಗಳಿಗೆ ಹತ್ತುವ ಪುರುಷವಾಚಕ ಪ್ರತ್ಯಯಗಳು ಪುರುಷ ವಾಚಕ ಸರ್ವನಾಮಗಳೆಂದು ಗೊತ್ತಾಗಿದೆ. ಆದ್ದರಿಂದ ಈ ಸರ್ವನಾಮ ಗಳ ಮೂಲರೂಪಗಳು ಆನ್, ಆಳ್, ಆರ್, ಇತ್ಯಾದಿಯಾಗಿದ್ದಿರಬೇಕು. ಆದರೆ ನಮಗೆ ಅವಾನ್, ಅವಾಳ್ ರೂಪಗಳು ದೊರೆಯುವುದಿಲ್ಲ. ಅಲ್ಲದೆ ತೃತಿಯಾದಿ ವಿಭಕ್ತಿಗಳಲ್ಲಿ ಎನ್ನ, ಎಮ್ಮ, ಎಮಗೆ ಎಂಬ ರೂಪಗಳಾಗುತ್ತವೆ. ಇದರಿಂದ **ಆನ್** ಎಂಬುದರ ಸ್ವರವು ಹ್ರಸ್ವವೆಂದು ತಾನೆ ತಿಳಿಯುವುದು. ಇದು ರೈಸರಿಗೆ ವಿರುದ್ಧ. **ಅನ್** ಎಂಬುದೆ ಮೂಲ ರೂಪ, **ಆನ್** ಎಂಬುದು ಅದರಿಂದ ಹುಟ್ಟಿದುದು. ಇದು ಮಾತನಾಡುವ ಭಾಷೆಯಲ್ಲಿದ್ದು ಸಾಹಿತ್ಯದಲ್ಲಿ ಅಪೂರ್ವವಾಗಿ ಪ್ರಯೋಗವಾಗುತ್ತದೆ.

ಇತ್ತೀಚಿನ ಕನ್ನಡ ಸಾಹಿತ್ಯಾಚಾರ್ಯರಾದ ಶ್ರೀಮಾನ್ **ಬಿ. ಎಂ. ಶ್ರೀಕಂಠಯ್ಯನವರೇ** ಮೊದಲಾದ ವಿದ್ವಾಂಸರು ರೈಸ್, ಕಿಟಲ್ ಸಾಹೇಬರು ಮಾಡಿದ ಅವಸ್ಥಾಭೇದಗಳನ್ನು ಒಪ್ಪಿಕೊಂಡರೂ ಅವುಗಳಿಗೆ ಹೇಳುವ ಕಾಲವನ್ನು ಒಪ್ಪಿಕೊಳ್ಳುವುದಿಲ್ಲ.

೧. ಭಾಷೆಯು ಜನರು ಹಳೆಯ ಅಂಗಿಯನ್ನು ಬಿಟ್ಟು, ಹೊಸ ಅಂಗಿಯನ್ನು ತೊಟ್ಟುಕೊಂಡಂತೆ, ಎಂದೋ ಒಂದು ದಿನ,ಒಂದು ಅವಸ್ಥೆಯನ್ನು ಬಿಟ್ಟು ಮತ್ತೊಂದನ್ನು ಪಡೆಯುವುದಿಲ್ಲ. ಹಿಂದಣ ಅವಸ್ಥೆಯ ಚಿನ್ಹಗಳು ಒಂದೊಂದಾಗಿ ಮರೆಯಾಗುತ್ತ ಹೊಸ ಅವಸ್ಥೆಯ ಚಿನ್ಹಗಳು

ನೆಲೆಯಾಗಿ ಹಳೆಯ ಚಿನ್ಹಗಳು ಮಾಯವಾಗುತ್ತವೆ. ಈ ದೃಷ್ಟಿಯಿಂದ ೯ನೆಯ ಶತಮಾನದ ಪ್ರಾರಂಭಕ್ಕೆ ಒಮ್ಮೆಲೆ ಹಳಗನ್ನಡವು ತಲೆಯೆತ್ತಿತೆಂದು ಹೇಳುವುದು ಸರಿಯಾಗಲಾರದೆಂದು ಇವರ ಮತ. ಹಳಗನ್ನಡ ರೂಪವು, ರೈಸರ ಪೂರ್ವದ ಹಳಗನ್ನಡದ ಕಾಲದಲ್ಲಿಯೆ ತಲೆಯೆತ್ತಿತ್ತೆಂದು ಇವರ ಅಭಿಪ್ರಾಯ. ಅದರಂತೆಯೆ ನಡುಗನ್ನಡದ ಸ್ಥಿತಿ. ಅಂದರೆ ಭಾಷೆಯು ಒಂದು ಮೆಟ್ಟಲಿನಿಂದ ಮತ್ತೊಂದು ಮೆಟ್ಟಲಿಗೆ ಬರಬೇಕಾದರೆ ನಡುವಣ ಕಾಲವು ಬೇಕಾಗುತ್ತದೆಂದೂ ಅದೇ **ಕಿಟೆಲರ** ಮಧ್ಯಕಾಲವೆಂದೂ ಇವರ ಅಭಿಪ್ರಾಯ.

ಒಟ್ಟಿನಲ್ಲಿ ಇವರ ಅಭಿಪ್ರಾಯದಂತೆ, ಪೂರ್ವದಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬಿವೇ ಕನ್ನಡ ಸಾಹಿತ್ಯದ ಅವಸ್ಥಾಭೇದಗಳು.

ಸಾಹಿತ್ಯವು ಮಾನವನ ಹೃದಯ-ಬುದ್ಧಿಗಳ ಅಗನ್ಯ ಮತ್ತು ಅಸಾಧಾರಣ ಶಕ್ತಿಗಳಿಂದ ನಿರ್ಮಾಣವಾಗುವದರಿಂದ. ಒಂದು ನಿಶ್ಚಿತ ಸ್ವರೂಪವನ್ನು ಹೇಳುವುದು ಕಠಿಣವಿದೆ.

ವಿದ್ವಾಂಸರಿಂದ ಮೊನ್ನಮಾಡಲ್ಪಟ್ಟ, ಈ ಸಾಮಾನ್ಯ ವಿಭಾಗಗಳೇ ನಮಗೆ ಸರಿಯಾಗಿ ಕಾಣುತ್ತವೆ.

## ಅವಸ್ಥಾಭೇದಗಳ ಲಕ್ಷಣಗಳು

ಈ ಎಲ್ಲ ವಿದ್ವಾಂಸರು ಹೇಳುವ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡವೆಂದು ಹೇಳುವ ಕನ್ನಡಭಾಷೆಯ, ಅವಸ್ಥಾಭೇದಗಳ ಲಕ್ಷಣಗಳನ್ನೂ ಅವುಗಳ ಕಾಲವನ್ನೂ ವಿಚಾರ ಮಾಡುವುದು ಕ್ರಮಪ್ರಾಪ್ತವಾಯಿತು.

**ಮೂಲಗನ್ನಡ ಅರ್ಥಾತ್ ಪೂರ್ವದ ಹಳಗನ್ನಡ (ಕ್ರಿ. ಶ. ೭೫೦ರ ವರೆಗೆ)**:—ಇದನ್ನು ಹಳಗನ್ನಡದಲ್ಲಿಯೇ ಸೇರಿಸಲಿ ಬೇಕಾದರೆ ಬಿಡಲಿ, ನೃಪತುಂಗನ ಪೂರ್ವದಲ್ಲಿ ಒಂದು ಬಗೆಯ ಕನ್ನಡವಿತ್ತೆಂಬ ಮಾತು ಎಲ್ಲರಿಗೂ ಒಪ್ಪಿತವಾಗಿದೆ. ಇದಕ್ಕೆ **ಮೂಲಗನ್ನಡ**ವೆಂದೆನ್ನಬಹುದು. ಹಳಗನ್ನಡ ವ್ಯಾಕರಣದಿಂದ ಸಿದ್ಧಿಸದ 'ಸಂದಾನ್, ಬಂದೊನ್,

ಒಕ್ಕಲುಳ್, ಕೆಡುಗ ಮೊದಲಾದ ರೂಪಗಳು ೮ನೆಯ ಶತಮಾನದ ವರೆಗಿನ ಶಾಸನಗಳಲ್ಲಿ' ದೊರೆಯುತ್ತವೆ. ಈ ಪ್ರತ್ಯಯಗಳೂ, ಪ್ರಯೋಗ ಗಳೂ ಈ ಮೂಲಗನ್ನಡದ ವೈಶಿಷ್ಟ್ಯವೆಂದು ಹೇಳಬಹುದು. ಇಂತಹ ರೂಪಗಳು ತಮಿಳಿನಲ್ಲಿಯೂ ದೊರೆಯುವ ರೂಪಗಳನ್ನು ಹೋಲುತ್ತವೆ. ಇದರ ಅರ್ಥವಿಷ್ಟೆ. ತಮಿಳರು ಕನ್ನಡಿಗರಿಂದ ಬೇರೆ ಹೋಗುವ ಪೂರ್ವ ದಲ್ಲಿ ಮಾತನಾಡುತ್ತಿದ್ದ ಮೂಲಗನ್ನಡವಿದು. ಹಳಗನ್ನಡವು ತಲೆಯೆತ್ತಿ ಈ ಮೂಲಗನ್ನಡದ, ರೂಪವನ್ನೆಲ್ಲ ಬದಲಿಸಿತು.

**ಹಳಗನ್ನಡ** (೯ನೆಯ ಶತಮಾನದಿಂದ ೧೩ನೆಯ ಶತಮಾನದ ವರೆಗೆ):—(೧) ಸಮತೆಯುಳ್ಳದ್ದು, (೨) ನಯ ನುಣ್ಪು ಉಳ್ಳದ್ದು, (೩) ಭಾಷಾಶುದ್ಧತೆ ಹಾಗು ಸ್ಪಷ್ಟತೆಯುಳ್ಳುದು, (೪) ಸಂಸ್ಕೃತ ತದ್ಭವ ಗಳ ಬಳಿಕೆ, (೫) ೞ, ಱ ಗಳು ಭೇದವುಳ್ಳ ಪ್ರಯೋಗಗಳು, (೬) ಅಲಂ ಕಾರಪ್ರಧಾನ, (೭) ಚಂಪೂಶೈಲಿ, ಇವೇ ಈ ಯುಗದ ವೈಶಿಷ್ಟ್ಯ.

**ನಡುಗನ್ನಡ** (೧೩ರಿಂದ ೧೫ನೆಯ ಶ. ದ ವರೆಗೆ):—(೧) ವಚನ ಸಾಹಿತ್ಯ, (೨) ಷಟ್ಪದಿಯ ಪ್ರಾರಂಭ, (೩) ವ್ಯಾಕರಣದ ಸ್ವಲ್ಪ ಶಿಥಿಲತೆ, (೪) ಅನೇಕ ಹೊಸ ಪ್ರತ್ಯಯಗಳ ನಿರ್ಮಾಣ, (೫) ೞ, ಱ ಗಳ ಕೊನೆ, (೬) ಪಕಾರಕ್ಕೆ ಹಕಾರ, ಇವು ನಡುಗನ್ನಡದ ವೈಶಿಷ್ಟ್ಯಗಳು.

**ಹೊಸಗನ್ನಡ** (೧೫ರಿಂದ ೧೯ನೆಯ ಶ. ವರೆಗೆ):—(೧) ಹೆಚ್ಚಾಗಿ ಗದ್ಯ, (೨) ವರ್ತಮಾನಕಾಲಕ್ಕೆ ಉತ್ತ ಪ್ರತ್ಯಯ, (೩) ವಿಭಕ್ತಿಪ್ರತ್ಯಯ ಗಳ ಹಾಗು ಧಾತುಪ್ರತ್ಯಯಗಳ ಒಡಲಾವಣೆ, (೪) ಅನ್ಯದೇಶ್ಯ ಶಬ್ದಗಳ ಬೆರಿಕೆ, (೫) ಪ್ರಾಂತ ಪ್ರಾಂತಕ್ಕೆ ಭಾಷೆಯ ಪರಿವರ್ತನೆ.

ಇಂದಿನ ಸಾಹಿತ್ಯದಲ್ಲ ಈ ಮೂರೂ ರೂಪಗಳನ್ನೂ ನಾವು ನೋಡಬಹುದು. ಓದುಗಬ್ಬಗಳ ಭಾಷೆ (ಚಂಪೂಕಾವ್ಯ) ಯನ್ನು **ಹಳಗನ್ನಡ**ವೆಂದೂ, ಹಾಡುಗಬ್ಬಗಳ (ಷಟ್ಪದಿ) ಭಾಷೆಯನ್ನು **ನಡು ಗನ್ನಡ**ವೆಂದೂ ಈಗಿನ ಗದ್ಯಗ್ರಂಥಗಳ ಭಾಷೆಯನ್ನು, **ಹೊಸಗನ್ನಡ** ವೆಂದೂ ಹೇಳಬಹುದು. ಈಗಲೂ ಕಂದ, ವೃತ್ತ ಮೊದಲಾದವುಗಳನ್ನು ಬರೆಯುವವರು ಹಳಗನ್ನಡದಲ್ಲಿಯೂ ಷಟ್ಪದಿ ಮೊದಲಾದವುಗಳನ್ನು ನಡುಗನ್ನಡದಲ್ಲಿಯೂ ಬರೆಯುವುದನ್ನು ನಾವು ಕಾಣುತ್ತೇವೆ. ಹಳ

ಗನ್ನಡವು ಹೊಸಗನ್ನಡವಾಗಿ ಕ್ರಮಕ್ರಮವಾಗಿ ಬದಲಾಗುತ್ತಿರುವ ನಡುಗನ್ನಡದ ಕಾಲದಲ್ಲಿ, ಹೊಸ-ಹಳಗನ್ನಡಗಳೆರಡೂ ಬೆರೆತಿರುವುದು ಸ್ವಾಭಾವಿಕವು. ಕಾಲಕ್ರಮದಲ್ಲಿ ಹೊಸಗನ್ನಡದ ರೂಪಗಳು ನೆಲೆಸಿ ಉಳಿದವು ಮಾಯವಾದವು.

ಇನ್ನು ಮುಂದಿನ ಪ್ರಕರಣದಲ್ಲಿ ಕನ್ನಡಭಾಷೆಯ ರೂಪರೇಷೆಗಳನ್ನು ನೋಡೋಣ.

# ೩. ಕನ್ನಡ ಸಾಹಿತ್ಯದ ರೂಪಲಕ್ಷಣಗಳು

•

## ಸಾಹಿತ್ಯಪ್ರಚೋದಕ ಶಕ್ತಿ

ಮಾನವನ ಹೊದಿಕೆಯು ಅವನ ನಿಜಸ್ವರೂಪವನ್ನು ಎಂದೂ ಅರುಹಲಾರದು. ಆವರಣವನ್ನು ತೆಗೆದೊಡನೆಯೇ ಅವನ ರೂಪಲಕ್ಷಣಗಳು ಹೊರಬೀಳುತ್ತವೆ. ಹಾಗೆಯೇ ಸಾಹಿತ್ಯದ ಅವಸ್ಥಾಭೇದಗಳನ್ನು ಅರಿತರೆ, ಅದರ ರೂಪಲಾವಣ್ಯಗಳು ತಿಳಿಯಲಾರವು. ಒಳರೂಪವನ್ನರಿಯುವುದೇ ಸಾಹಿತ್ಯಚರಿತ್ರೆಯ ಮುಖ್ಯ ಉದ್ದೇಶವು.

ಪ್ರತಿಯೊಂದು ಪದಾರ್ಥಕ್ಕೂ ಅದರ ಒಳಗಣ ಹಾಗು ಹೊರಗಣ ಎಂಬ ಎರಡು ರೂಪಗಳಿರುತ್ತವೆ. ಅಂತಃಶಕ್ತಿಯೇ ಬಹಿಸ್ಸೃಷ್ಟಿಗೆ ಕಾರಣವು. ಆ ಶಕ್ತಿಯು ತಾನು ಹೊರಹೊಮ್ಮಲು ಅನುಕೂಲವಾದ ಸಾಧನ ಹಾಗು ರೂಪಗಳನ್ನು ನಿರ್ಮಿಸಿಕೊಳ್ಳುತ್ತದೆ. ಇದು ಪ್ರಕೃತಿಯ ಸ್ವಭಾವ.

ಈ ದೃಷ್ಟಿಯಿಂದ ಕನ್ನಡ ಸಾಹಿತ್ಯದ **ಪ್ರಚೋದನಶಕ್ತಿ** ಯಾವುದು? ಜೀವನವು ಯಾವುದು? ಎಂಬುದೇ ಮುಖ್ಯ ಪ್ರಶ್ನೆ. ಸಾಹಿತ್ಯದ **ಪುಟ**ಗಳನ್ನು ತಿರುವಹತ್ತಿದರೆ, **ಧರ್ಮವೇ** (ಮತಪ್ರಚಾರ) **ಸ್ಫೂರ್ತಿಯ ಶಲೆ** ಎಂದು ತೋರುವುದು. 'ಧರ್ಮದ (ಮತದ) ಉಸಿರಿನಿಂದಲೇ ಹಳಗನ್ನಡ ಸಾಹಿತ್ಯವು ಜನ್ಮತಾಳಿದೆ' ಎಂದು ಹೇಳಬಹುದು. ಪಂಪ, ರನ್ನರಿಂದ ಮೊದಲುಗೊಂಡು, ಎಲ್ಲ ಉದ್ದಾಮ ಕವಿಗಳು ತಮ್ಮ ಮತದ ಸಂದೇಶವನ್ನು ಸಾರುವುದಕ್ಕೆ ಸಾಹಿತ್ಯಕ್ಕೆ ಕೈಯಿಕ್ಕಿದುದು ಕಂಡುಬರುತ್ತದೆ.

ಆದಿಪಂಪನು **ಜಿನಾಗಮವು** 'ಸಮಸ್ತ ಭೂತಳಕೆ ಬೆಳಗುವಂತೆ' ಮಾಡುವುದಕ್ಕಾಗಿಯೇ ("ಆದಿಪುರಾಣದೊಳಿಮುವುದು ಕಾವ್ಯಧರ್ಮಮಂ ಧರ್ಮಮುಮಂ!") ಆದಿಪುರಾಣವನ್ನು ಬರೆದಿರುವೆನೆಂದು ಹೇಳುತ್ತಾನೆ.

ಪಂಪನನ್ನೇ ಗುರುವಾಗಿ ಇಟ್ಟುಕೊಂಡ, ಬಹುತರ ಆ ಕಾಲದ ಜೈನ ಪ್ರೌಢಕವಿಗಳೆಲ್ಲರೂ ಮತಪ್ರಚಾರಕ ಗ್ರಂಥವನ್ನು ಬರೆದುದು ಕಂಡುಬರುತ್ತದೆ. ಇವೆಲ್ಲ ಸುಂದರವಾದ, ಲಲಿತವಾದ, ಪ್ರೌಢವಾದ ಕಾವ್ಯಗಳು. ಈ ಪುರಾಣಗಳನ್ನೆಲ್ಲ ಮತಪ್ರಚಾರಕ್ಕಾಗಿ, ಸ್ವಧರ್ಮಸ್ಫೂರ್ತಿಯಿಂದ, ಬರೆದ ಗ್ರಂಥಗಳೆಂದು ಒಪ್ಪದೆ ಗತ್ಯಂತರವಿಲ್ಲ.

ಏನೋ ಕೆಲ ಜೈನ ಗ್ರಂಥಕಾರರು, ಮತಾಭಿಮಾನದಿಂದ ಬರೆದಿರಬಹುದು, ಎಂದು ಶಂಕಿಸಬಹುದು. ಆದರೆ ಅವರ ಮುಂದಿನ ಸಾಹಿತ್ಯ-ಕಾರರೂ ಕೂಡ ಇದೇ, ಹಾದಿಯನ್ನು ಹಿಡಿದುದು ಕಂಡುಬರುತ್ತದೆ. **ಶ್ರೀ ಬಸವೇಶ್ವರ** ಮೊದಲಾದ ವಚನಕಾರರು ರಚಿಸಿದ, ವಚನದ ರಾಶಿಯೆಲ್ಲವೂ ವೀರಶೈವ ಮತಪ್ರಚಾರವನ್ನೇ ಸೂಚಿಸುತ್ತದೆ. ಆ ಕಾಲಕ್ಕೆ ಹೊರಟ ಮಹಾಕಾವ್ಯಗಳು ಕೂಡ, ಇದೇ ಕಾರ್ಯವನ್ನು ನೆರವೇರಿಸಲು ಹೊರಟಿವೆ. ಇದಕ್ಕೂ ಮುಂದೆ ಹೆಜ್ಜೆಯನ್ನಿಟ್ಟರೂ ವೈಷ್ಣವ **ದಾಸಕೂಟ** ಸಾಹಿತ್ಯವು ಎದುರಿಗೆ ಬರುತ್ತದೆ. ಅದು ಕೂಡ ಮತಪ್ರಚಾರವಲ್ಲವೇ? ಈ ಕಾಲದ ಮಹಾಕಾವ್ಯಗಳಾದ ಭಾರತ-ರಾಮಾಯಣಗಳೂ ಒಂದು ಬಗೆಯಿಂದ ವೈದಿಕಮತದ ಪ್ರಚಾರವನ್ನು ಕೈಕೊಂಡಿಲ್ಲವೇ? ಇವರು ಕವಿಗಳಲ್ಲ, ಸಾಹಿತಿಗಳಲ್ಲ, ಕೇವಲ ಮತಪ್ರಚಾರಕ್ಕಾಗಿಯೇ ಬರೆದಿರುವರು ಎಂದು, ನಮ್ಮ ಅಭಿಪ್ರಾಯವಲ್ಲ. ಈ ಎಲ್ಲ ಸಾಹಿತ್ಯಕ್ಕೆ ಸ್ಫೂರ್ತಿ–ಪ್ರಚೋದನಾಶಕ್ತಿ–**ಧರ್ಮ** ಹಾಗು ಮತಪ್ರಚಾರವೆಂಬುದೇ ಮುಖ್ಯ ವಿಷಯ.

ಇಷ್ಟೇ ಏಕೆ? ಕರ್ನಾಟಕ ಸಂಸ್ಕೃತಿಯೇ ಧರ್ಮದ ಬುನಾದಿಯ ಮೇಲೆ ನಿಂತಿದೆ. ಮಾನವನ ಮನಸ್ಸು ಮೂಡುವುದು ಸಾಹಿತ್ಯ, ಶಿಲ್ಪಕಲೆ, ವಾಸ್ತುಶಿಲ್ಪ, ಮತ್ತು ಚಿತ್ರಗಳಲ್ಲಿ. ಈಗ ಪ್ರಾಚೀನ ಸಂಸ್ಕೃತಿಯನ್ನು ತೋರಿಸುವ ಶಿಲ್ಪಕಲೆ, ವಾಸ್ತುಗಳಲ್ಲಿ ಏನು ಕಂಡುಬರುವುದು? ಬಸದಿ, ದೇವಾಲಯಗಳು ಏನನ್ನು ಸೂಚಿಸುತ್ತವೆ? ಇವೆಲ್ಲಕ್ಕೂ ಧರ್ಮ–ಮತ ಪ್ರಚಾರಗಳೇ ಕಾರಣವಲ್ಲವೇ?

ಯಾವ ನಿಟ್ಟಿನಿಂದ ನೋಡಿದರೂ ಆ ಕಾಲದಲ್ಲಿ **ಧರ್ಮ–ಮತ ಪ್ರಚಾರಗಳೇ** ಪ್ರಚೋದಕ ಶಕ್ತಿಗಳೆಂದು ಕಂಡುಬರುತ್ತದೆ.

ಇದಕ್ಕೆ ಕಾರಣವೂ ಇಲ್ಲದಿಲ್ಲ. ನಮ್ಮ ದೇಶದಲ್ಲಿ ರಾಜ್ಯಕ್ರಾಂತಿಗಳು ಜನತೆಯ ಮೇಲೆ ಅಷ್ಟೊಂದು ಪರಿಣಾಮವನ್ನುಂಟುಮಾಡಿಲ್ಲ. ಅಂದರೆ ರಾಜ್ಯಕ್ರಾಂತಿಗಳ ಪರಿಣಾಮಗಳಿಂದ ಸಾಹಿತ್ಯಕ್ಷೇತ್ರವು ಕದಡಿಲ್ಲ. ಆದರೆ ಇದು ಧರ್ಮಕ್ರಾಂತಿಯ ವೀರಭೂಮಿ. ಜೈನ, ವೀರಶೈವ, ರಾಮಾನುಜ, ಮಧ್ವರಿಂದ ಮತಗಳಕ್ರಾಂತಿಗಳು ಎಡೆಬಿಡದೆ ನಡೆದುವು ಧರ್ಮಕ್ರಾಂತಿಗೆ ಸಾಮಾನ್ಯ ಜನತೆಯ ಮನಸ್ಸೇ ಸಾಧನ. ಆದುದರಿಂದ ಈ ಧರ್ಮಕ್ರಾಂತಿಗಳ ಪರಿಣಾಮವು ಸಾಹಿತ್ಯದ ಮೇಲೆ ಆಗುವುದು ಸ್ವಾಭಾವಿಕ.

ಸಾಹಿತ್ಯದಲ್ಲಿ-ಕಾವ್ಯದಲ್ಲಿ ಜನಮನ ಕರಗಿಸುವಂತಹ ಮಾಯಾ ಶಕ್ತಿಯಿದೆ. ಎಲ್ಲ ಕಲೆಗಳಲ್ಲಿಯೂ ಕಂಡುಬರುವ ಸಾಮಾನ್ಯ ಗುಣವಿದು. ಒಂದು ಧರ್ಮದ ಮತಪ್ರಚಾರದ ಕಾರ್ಯವನ್ನು ಸಕ್ಕರೆಯ ಸವಿಯಿಂದ ಸಹಜವಾಗಿ ಮಾಡಲು ಕಾವ್ಯವು ಉತ್ತಮವಾದ ಸಾಧನ. ಆದುದರಿಂದಲೇ ಮತಪ್ರಚಾರಕ್ಕೆ ಸಾಹಿತ್ಯವು ಬಳಸಲ್ಪಟ್ಟಿರುವುದು.

ಇದೊಂದು ಮತಪ್ರಚಾರಕ್ಕೆ ಸಾಧನವಾದ ಮೇಲೆ, ಜನರ ಬಳಕೆಯ ಭಾಷೆಯಲ್ಲಿ, ನಡಾವಳಿಗಳಲ್ಲಿ ಬೆರೆತು, ಅವರಿಗೆ ತಿಳಿಯುವ ಬಗೆಯಲ್ಲಿ ಹೇಳುವುದು ಕ್ರಮಪ್ರಾಪ್ತವಾಯಿತು. ಈ ಮಾತನ್ನು ನಾವು ಚೆನ್ನಾಗಿ ಅರಿತರೆ ನಮ್ಮ ಸಾಹಿತ್ಯದ ಬದಲಾವಣೆಗಳು ಬಹುಬೇಗನೆ ನಮ್ಮ ಮನಸ್ಸನ್ನು ಹಿಡಿಯುವವು.

## ತನ್ನತನವನ್ನು ಕಾಯ್ದುಕೊಳ್ಳುವ ಶಕ್ತಿ

ನಮ್ಮ ಸಾಹಿತ್ಯದಲ್ಲಿ ಇನ್ನೊಂದು ಬಗೆಯ ಶಕ್ತಿಯು ಮಸಮಸಕಾಗಿ ಕಾಣುವುದು. ಅದೇ **ಪ್ರತಿಭಟನಾಶಕ್ತಿ** ಅಥವಾ **ತನ್ನತನವನ್ನು** ಕಾಯ್ದುಕೊಳ್ಳುವ ಶಕ್ತಿ. ಸಾಹಿತ್ಯದ ಪುಟವನ್ನು ತಿರುವಲು ಪ್ರಾರಂಭಿಸಿದೊಡನೆಯೆ, ಸಂಸ್ಕೃತವನ್ನು ಎಷ್ಟರಮಟ್ಟಿಗೆ ಬೆರೆಯಿಸಬೇಕೆಂಬ ಬಗ್ಗೆ **ನೃಪತುಂಗನು** ವಿಚಾರ ಮಾಡಿ ಕೆಲವು ಕಟ್ಟಳೆಗಳನ್ನು ಹೇಳುತ್ತಾನೆ. ಸಂಸ್ಕೃತಮಯವಾದ ಕಾವ್ಯರಚನೆಯನ್ನು ೧೧ನೆಯ ಶತಮಾನದಲ್ಲಿ **ದುರ್ಗಸಿಂಹನೂ**, ೧೨ನೆಯ ಶತಮಾನದಲ್ಲಿ " ಪೊಸಗನ್ನಡದಿಂ

ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಂ ಚಿಂತಿಸಿ ಕೂಡಲಾಱ ದಕ್ಕಟ ಮಿಸುಕದಸಕ್ಕದವುನಿಕ್ಕುವವನುಂ ಕವಿಯೇ" ಎನ್ನುವ ಮಟ್ಟಿಗೆ **ನಯಸೇನನೂ** ಪ್ರತಿಭಟಿಸಿದ್ದಾನೆ. ೧೩ನೆಯ ಶತಮಾನದಲ್ಲಿ ಯಂತೂ, **ಅಂಡಯ್ಯನು** ತಾನು ಸಂಸ್ಕೃತವನ್ನು ಬೆರೆಯಿಸದೆ, ಅಚ್ಚಗನ್ನಡದಿಂದ ಕಾವ್ಯವನ್ನು ಬರೆಯುವೆನೆಂದು ಪಣತೊಟ್ಟು 'ಕಬ್ಬಿಗರಕಾವ' ಎಂಬ ಗ್ರಂಥವನ್ನು ಬರೆದು, ಇದು 'ದೇಸಿಯ ಗೊತ್ತು', 'ಜಾಣ್ಣುಡಿಯ ತಾಪ್ಪನೆ', 'ನುಣ್ಬುರುಳೇಱಗೆ' ಎಂದು ಹೇಳಿ, **"ಕನ್ನಡದೊಳ್ಪಿನ ನುಡಿಯಂನುನ್ನಿದರೊಳೆ ನೋಡಿ ತಿಳಿದುಕೊಳ್ವುದು ಚದುರಂ"** ಎಂದು ವಿದ್ವಾಂಸರಿಗೆ ಆಹ್ವಾನಿಸಿದ್ದಾನೆ. ಹೀಗೆ **ಕನ್ನಡತನವನ್ನು** ಕಾಯ್ದುಕೊಳ್ಳಲೂ, ಅನ್ಯಭಾಷೆಗೆ ಕನ್ನಡದ ಮುದ್ರೆಯನ್ನೊತ್ತಿ **'ಕನ್ನಡಿಸಿಕೊಳ್ಳಲು'** ಹೋರಾಡಿದ ಈ ದೃಶ್ಯವು ಏನನ್ನು ತೋರಿಸುತ್ತದೆ?

ಇನ್ನೊಂದು ಮಾತು. ಸಂಸ್ಕೃತವಿದ್ವಾಂಸರಾದ ಜೈನಪಂಡಿತರಿಂದ ಪಾಂಡಿತ್ಯಪ್ರದರ್ಶನಕ್ಕಾಗಿ ಸಂಸ್ಕೃತದ ಧಾಟಿಯಲ್ಲಿ ನಡೆದ ಸಾಹಿತ್ಯವನ್ನು ತಿರುಗಿಸಿ, **ಕನ್ನಡದ ಹಾಡುಗಬ್ಬಕ್ಕೆ** ಹಚ್ಚಿದ ಪ್ರಯತ್ನವಂತೂ ಅತ್ಯಂತ ಆಶ್ಚರ್ಯಕರವಾಗಿದೆ. ಅಕ್ಷರದಿಂದ ಸಾಹಿತ್ಯವು ಒಮ್ಮೆಲೆ ಮಾತ್ರಾವೃತ್ತಕ್ಕೆ ತಿರುಗಿ, ರಗಳೆ ಷಟ್ಪದಿ ರೂಪಕ್ಕೆ ಬಂದುದು ಅತ್ಯಂತ ವಿಚಾರಣೀಯ ಸಂಗತಿಯಾಗಿದೆ.

ಇಂತಿವೆಲ್ಲ ಮಾತುಗಳಲ್ಲಿರುವ **ಅಂತಃಶಕ್ತಿಯು ತನ್ನತನವನ್ನು** ಕಾಯ್ದುಕೊಳ್ಳುವುದೇ, ಎಂದು ನಮಗನಿಸುತ್ತದೆ. ವಿದ್ವಾಂಸರು ಈ ದೃಷ್ಟಿಯಿಂದ ಸಾಹಿತ್ಯವನ್ನು ನೋಡಬೇಕು.

## ನಮ್ಮ ಸಾಹಿತ್ಯದ ಅಂಗಗಳು

ಇಲ್ಲಿಯ ವರೆಗೆ ನಮ್ಮ ಸಾಹಿತ್ಯದ **ಅಂತಃಶಕ್ತಿಯ** ಬಗ್ಗೆ ವಿಚಾರ ಮಾಡಿದ್ದಾಯಿತು. ಈ ಶಕ್ತಿಯು ಯಾವ ಯಾವ ರೂಪದಿಂದ ಹೊರಹೊಮ್ಮಿದೆ ಎಂಬುದನ್ನು ನೋಡೋಣ.

ಕನ್ನಡ ಸಾಹಿತ್ಯವಾಹಿನಿಯ ಕಡೆಗೆ, ಒಮ್ಮೆ ದೃಷ್ಟಿಯನ್ನು ಚಲ್ಲಿದರೆ, ಆಶ್ಚರ್ಯ ಆನಂದಗಳು ಒಮ್ಮೆಲೆ ಮನಸ್ಸಿನಲ್ಲಿ ಉಂಟಾಗುತ್ತವೆ.

ಕಾವ್ಯ, ನಾಟಕ, ಅಲಂಕಾರ, ಶಾಸ್ತ್ರ ಇವೇ ಮೊದಲಾದ ವಿವಿಧ ರೂಪಗಳು ಕಣ್ಣೆದುರಿಗೆ ನಿಲ್ಲುತ್ತವೆ. ಕಾವ್ಯವೊಂದನ್ನೇ ನೋಡಲು ಹೋದರೂ ಕೂಡ ಅವಕ್ಕೆ ಬಡೆದ ಅನೇಕ ಶಾಖೋಪಶಾಖೆಗಳು ದಿಗ್ಭ್ರಮೆಯನ್ನುಂಟುಮಾಡುತ್ತವೆ. ಆದರೂ ನಮ್ಮ ಸಾಹಿತ್ಯದ ಅಂಗಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು.

(೧) ಕಾವ್ಯಗಳು, (೨) ವಚನಗಳು, (೩) ಕೀರ್ತನೆಗಳು, (೪) ನಾಟಕಗಳು (೫) ಶಾಸ್ತ್ರಗಳು. ಕಾವ್ಯಗಳಲ್ಲಿ, (ಅ) ಚಂಪೂಕಾವ್ಯ, (ಬ) ರಗಳೆಗಳು, (ಕ) ಷಟ್ಪದಿಗಳು, (ಡ) ಸಾಂಗತ್ಯ, ಗದ್ಯ. ಚಂಪೂಕಾವ್ಯಗಳಲ್ಲಿ ಎರಡು ಪ್ರಕಾರಗಳು ಕಾಣುತ್ತವೆ. ಪುರಾಣ ಮತ್ತು ಲೌಕಿಕ; ಇದರಂತೆಯೇ ಪ್ರತಿಯೊಂದರಲ್ಲಿಯೂ ಶಾಖೋಪಶಾಖೆಗಳು ಕಾಣುತ್ತವೆ. ಒಟ್ಟಿನಲ್ಲಿ ನಮ್ಮ ಸಾಹಿತ್ಯವಾಹಿನಿಯ ಶಾಖೆಗಳನ್ನು ಈ ರೀತಿಯಾಗಿ ವಿಂಗಡಿಸಬಹುದು.




ಇದರಂತೆ ಪ್ರತಿಯೊಂದು ಕಾವ್ಯ.

ಹೀಗೆ ನಮ್ಮ ಸಾಹಿತ್ಯವಾಹಿನಿಯು ವಿರಾಟರೂಪವನ್ನು ತಾಳಿದೆ.

ಇನ್ನು ಈ ಅಂಗಗಳ ಲಕ್ಷಣಗಳನ್ನೂ ಅವುಗಳ ರೂಪವನ್ನೂ ಪರೀಕ್ಷಿಸಿದರೆ, ನಾವು ನಮ್ಮ ಸಾಹಿತ್ಯದ ರೂಪಲಕ್ಷಣಗಳನ್ನು ತಿಳಿದುಕೊಂಡಂತಾಯಿತು.

# ೪. ಕಾವ್ಯಗಳು

## ಚಂಪೂಕಾವ್ಯ

ಕನ್ನಡ ಸಾಹಿತ್ಯ ಸಾಮ್ರಾಜ್ಯವನ್ನು ಚಂಪೂಕಾವ್ಯಗಳು ಅಖಂಡವಾಗಿ ಸುಮಾರು ೩೦೦ ವರ್ಷಗಳ ವರೆಗೆ ಆಳಿದುದು ಕಂಡು ಬರುತ್ತದೆ. ಕನ್ನಡ ಸಾಹಿತ್ಯ ಸಾಮ್ರಾಟರಾದ **ಪಂಪ, ಪೊನ್ನ, ರನ್ನರೇ ಈ ಯುಗದ ಸೀಮಾಪುರುಷರು.** ಇದು ಮಹಾಕಾವ್ಯಗಳ ಸುಗ್ಗಿಯ ಕಾಲ. ಅಸಾಧಾರಣವಾದ ನಯನುಣ್ಪುಗಳಿಂದಲೂ, ಭಾಷೆಯ ಬಿಗುವಿನಿಂದಲೂ, ಅಲಂಕಾರಗಳಿಂದಲೂ, ಸಂಸ್ಕೃತದ ಬಿಂಕದಿಂದಲೂ ಪದಲಾಲಿತ್ಯದಿಂದಲೂ, ಭಾಷೆಯ ಪ್ರೌಢಿಮೆಯಿಂದಲೂ ಕಾವ್ಯವಾಹಿನಿಯು, ಗಂಭೀರವಾಗಿ ಆಳವಾಗಿ ಹರಿಯುವುದನ್ನು ನಾವು ಇಲ್ಲಿನೋಡುತ್ತೇವೆ.

ಪಂಪನೇ ಈ ಯುಗದ **ಆದ್ಯಪ್ರವರ್ತಕ.** ಇವನು ಲೌಕಿಕವನ್ನು ಬೆಳಗಿಸುವುದಕ್ಕಾಗಿ ಭಾರತವನ್ನೂ ಧರ್ಮವನ್ನರುಹುವುದಕ್ಕಾಗಿ ಆದಿಪುರಾಣವನ್ನೂ ರಚಿಸಿ ಮಾರ್ಗದರ್ಶಿಯಾದನು. ಇವನು ಬರೆದುದು ಚಂಪೂಗ್ರಂಥ ಮಹಾಕಾವ್ಯ. ಇವನ ದಾರಿಯೇ ಹೆದ್ದಾರಿಯಾಯಿತು. ಈ ಯುಗದ ಕವಿಗಳೆಲ್ಲರೂ ಇವನ ಮಾರ್ಗವನ್ನೇ ಅನುಕರಣಮಾಡಿದರು. ಪಂಪನ ಚಂಪೂ ಶೈಲಿಯಲ್ಲಿಯೇ ಪೊನ್ನ, ರನ್ನ, ಜನ್ನ, ನೇಮಿಚಂದ್ರ ಮೊದಲಾದವರೂ ಮಹಾ ಕಾವ್ಯಗಳನ್ನು ಬರೆಯಲು ಮೊದಲು ಮಾಡಿದರು. ಪ್ರತಿಯೊಬ್ಬರೂ, ಒಂದು ಲೌಕಿಕ ಕಾವ್ಯವನ್ನು ಬರೆಯಲು ಪ್ರಾರಂಭಿಸಿದರು. ಈ ಅನುಕರಣವು ಇಷ್ಟಕ್ಕೇ ನಿಲ್ಲಲಿಲ್ಲ. ರನ್ನನು ಕಥಾವಸ್ತುವನ್ನೂ ಕೂಡ. ಪಂಪನಂತೆ ಭಾರತದಲ್ಲಿಯ ಒಂದು ಸನ್ನಿವೇಶವನ್ನು ಆಯ್ದುಕೊಂಡನು. ಇಷ್ಟೇ ಅಲ್ಲದೆ ನಿರೂಪಣೆಯಲ್ಲಿ ಕೂಡ ಕೊಂಚಮಟ್ಟಿಗೆ ಅನುಕರಣೆಯು ಕಂಡು ಬರುತ್ತದೆ. ಆದರೆ ರನ್ನನು

ಉದ್ದಾಮ ಕವಿಯು; ಕವಿಚಕ್ರವರ್ತಿಯು. ಪಂಪನನ್ನು ಗುರುವನ್ನಾಗಿ ತಿಳಿದುಕೊಂಡ ರನ್ನನಲ್ಲಿ ಅವನ ಛಾಯೆಯು ಅಕಲ್ಪಿತವಾಗಿ ಮೂಡಿದರೆ ಅದು ದೋಷವಲ್ಲ. ರನ್ನನು ದುರ್ಯೋಧನನಂತಹ, ಪಾತ್ರದಲ್ಲಿ ಹರಿಸಿದ ಕರುಣಾರಸದ ಒಂದು ಭಾಗವನ್ನು ಓದಿದರೆ ಸಾಕು. ಅವನ ಪ್ರತಿಭೆಯ ಬಗ್ಗೆ ಪೂರ್ಣ ವಿಶ್ವಾಸವಾಗುವಂತಿದೆ. ಇರಲಿ.

ಅಂತೂ ಈ ಯುಗದ ಯಾವುದೇ ಪ್ರಸಿದ್ಧ ಕವಿಯನ್ನು ತೆಗೆದುಕೊಂಡರೂ ಶೈಲಿ, ವಸ್ತು, ರೀತಿ, ಅಲಂಕಾರ ವರ್ಣನೆಗಳಲ್ಲಿ ಅನುಸರಿಸಿದುದೇ ಕಂಡು ಬರುತ್ತದೆ. ಪ್ರತಿಯೊಬ್ಬರೂ ಮತಪ್ರಚಾರಕ್ಕಾಗಿ ಗ್ರಂಥ ಬರೆದುದು ಕಂಡುಬರುತ್ತದೆ.

ಹಾಗಾದರೆ ಇವರೆಲ್ಲರೂ ಉದ್ದಾಮ ಕವಿಗಳು ಹೇಗೆ? ಚಾಚೂ ಬಿಡದಂತೆ ಅನುಸರಿಸುವುದು ನಿಜವಾಗಿಯೂ ಕವಿಯ ಲಕ್ಷಣವೆ? ಎಂಬ ಪ್ರಶ್ನೆಯು ಸಹಜವಾಗಿ ತಲೆ ಎತ್ತುವುದು. ಈ ಪ್ರಶ್ನೆಯನ್ನು ಬಿಡಿಸಬೇಕಾದರೆ ಆ ಕಾಲದ ಯುಗಧರ್ಮವನ್ನು, ನಾವು ನೋಡಬೇಕು.

ಅನುಕರಣವೆಂದು ತೋರುವ ಈ ಪರಂಪರೆಯು ಸಂಸ್ಕೃತ ಮಹಾಕಾವ್ಯಗಳಲ್ಲಿಯೂ ಕಂಡು ಬರುತ್ತದೆ. ಅಶ್ವಘೋಷ, ಕಾಲಿದಾಸರ ವರ್ಣನೆಗಳಲ್ಲಿಯೂ ಅನೇಕ ಮಹಾ ಕಾವ್ಯಗಳಲ್ಲಿಯೂ ಈ ಪರಂಪರೆಯುಂಟು. ಹಾಗಾದರೆ ಇದರ ಉತ್ತರವು ಆ ಕಾಲದ ಯುಗಧರ್ಮದಲ್ಲಿ.

೯-೧೦ನೇ ಶತಮಾನಗಳು ದಂಡಿಯೇ ಮೊದಲಾದ ಉದ್ದಾಮ ಸಂಸ್ಕೃತ ಕವಿಗಳ ಪ್ರಭಾವದ ಕಾಲ. ಸಂಸ್ಕೃತದ ಸಾಹಿತ್ಯವು ಎಲ್ಲೆಲ್ಲಿಯೂ ಮಿಗಿಲಾಗಿ ತನ್ನ ಪ್ರಭಾವವನ್ನು ಭಾರತದಲ್ಲೆಲ್ಲ ಬೀರಿತ್ತು. ಎಲ್ಲೆಲ್ಲಿಯೂ ಅದಕ್ಕೆ ಮನ್ನಣೆ. ಅದರ ಮಾರ್ಗವೇ ಆದರ್ಶ. ಇಂತಹ ಕಾಲದಲ್ಲಿಯೇ ನಮ್ಮ ಹಳಗನ್ನಡ ಪ್ರೌಢ ಗ್ರಂಥಗಳ ಜನ್ಮ. ಪಂಡಿತರು,-ಕವಿಗಳು, ಸಂಸ್ಕೃತದ ಧಾಟಿಯನ್ನೇ ಆದರ್ಶವಾಗಿಟ್ಟುಕೊಳ್ಳದೇ ಗತ್ಯಂತರವಿರವಷ್ಟು ಅದರ ಪ್ರಾಬಲ್ಯ. ಲಾಕ್ಷಣಿಕರು ಕಾವ್ಯದಲ್ಲಿ ರಸ, ಧ್ವನಿ ಮುಂತಾದ ಯಾವ ಅಂಶಕ್ಕೇ ಪ್ರಾಧಾನ್ಯ ಕೊಡಲಿ, ನೃಪತುಂಗನ ಕಾಲಕ್ಕೆ ಹಿಂದೆಯೇ ಸಂಸ್ಕೃತ ಕವಿಗಳು ಚಮತ್ಕಾರಪ್ರಿಯರಾಗಿ

ಬಾಣನ ಕಾವ್ಯಗಳಿಗೆ, ಅಗ್ರಸ್ಥಾನವನ್ನು ಕೊಟ್ಟು 'ಬಾಣೋಚ್ಛಿಷ್ಟಂ ಜಗತ್ ಸರ್ವಂ' ಎಂದು ಹೇಳುತ್ತಿದ್ದರು. ಕನ್ನಡಿಗರೂ ಇವರ ಮಾರ್ಗವನ್ನು ಅನುಸರಿಸಿ- **ಪಂಡಿತ ರಂಜಕವಾದ** ಘನವಾದ **ಚಂಪೂಕಾವ್ಯ**ಗಳನ್ನು ಬರೆದರು. ಆ ಕಾಲದಲ್ಲಿ ಕಾವ್ಯದ ಲಕ್ಷಣಗಳು ನಿರ್ಧರಿಸಲ್ಪಟ್ಟಿದ್ದವು. ಆ ಲಕ್ಷಣಗಳಿಲ್ಲದ ಕಾವ್ಯವೆಂದರೆ ಕಾವ್ಯವೇ ಅಲ್ಲವೆನ್ನುವವರೆಗೆ, ಜನಾಭಿಪ್ರಾಯವು ಬೆಳೆದಿತ್ತು.

ಪದ್ಯಕಾವ್ಯಗಳಲ್ಲಿ ಪ್ರಸಿದ್ಧವಾದದ್ದು **ಮಹಾಕಾವ್ಯ**. ಅದರಲ್ಲಿ ಆಶ್ವಾಸ, ಸಂಧಿ ಮೊದಲಾದ ವಿಭಾಗಗಳಿರುತ್ತವೆ ಮೊದಲಲ್ಲಿ ಆಶೀರ್ವಾದ, ನಮಸ್ಕಾರ ಅಥವಾ ವಸ್ತುನಿರ್ದೇಶವಿರುತ್ತದೆ. ಅದರ ವಸ್ತುವು ( ಕಥಾಭಾಗವು ) ಪುರಾಣೇತಿಹಾಸದಿಂದಾಗಲೀ ಮತ್ತಾವುದಾದರೂ ಪ್ರಸಿದ್ಧವಾದ ಗ್ರಂಥಗಳಿಂದಾಗಲೀ ತೆಗೆದುಕೊಂಡದ್ದು. ಚತುರ್ವಿಧ ಪುರುಷಾರ್ಥಪ್ರಾಪ್ತಿಯನ್ನುಂಟುಮಾಡುವ ಉದ್ದೇಶವುಳ್ಳದ್ದು. ಪಟ್ಟಣ, ಸಮುದ್ರ, ಪರ್ವತ, ಋತು, ಚಂದ್ರೋದಯ, ಸೂರ್ಯೋದಯ, ಉದ್ಯಾನ, ಜಲಕ್ರೀಡೆ, ಮಧುಪಾನ, ಸಂಭೋಗ-ವಿಪ್ರಲಂಭ-ಶೃಗಾರ, ವಿಹಾಹ, ಪುತ್ರೋತ್ಪತ್ತಿ, ಮಂತ್ರಾಲೋಚನೆ, ದ್ಯೂತ, ಪಯಣ, ಯುದ್ಧ, ನಾಯಕನ ಜಯಪ್ರಾಪ್ತಿ, ಈ ಹದಿನೆಂಟು ವಿಷಯಗಳ ವರ್ಣನೆಗಳಿಂದ ಕೂಡಿದ್ದು, ವಸ್ತುವಿವರಣವು ಕೇವಲ ಸಂಕ್ಷೇಪವಾಗಿರದೆಯೂ ಆಶ್ವಾಸಾದಿ ವಿಭಾಗಗಳು ಕೇವಲ ವಿಸ್ತಾರವಾದವುಗಳಲ್ಲದೆಯೂ ಇರತಕ್ಕದ್ದು. ಶ್ರಾವ್ಯವಾದ ವೃತ್ತಗಳಿಂದಲೂ ಒಳ್ಳೆಯ ಸಂಧಿಗಳಿಂದಲೂ ಆಶ್ವಾಸಾಂತ್ಯದಲ್ಲಿ ಬೇರೆ ವೃತ್ತವುಳ್ಳದ್ದೂ, ಒಂದು ಸರ್ಗದ ಕೊನೆಯಲ್ಲಿ ಮುಂದಿನ ಸರ್ಗದ ಸೂಚನೆಯುಳ್ಳದ್ದೂ, ಅಲಂಕಾರಗಳಿಂದ ಯುಕ್ತವಾದದ್ದೂ ಇರಬೇಕು. ಹಾಗೆಯೇ ಸಂಕೇತವಾಗಿ ಉಳಿದ ಅಸದಾಖ್ಯಾತಿ, ಸದಕೀರ್ತನೆ, ಐಕ್ಯ ಮೊದಲಾದ ಕವಿಸಮಯದ ವಿಭಾಗಗಳೂ ಕವಿಸಂಪ್ರದಾಯದ ವಿವಿಧ ಲಕ್ಷಣಗಳೂ ಇರಬೇಕು. ಈ ಲಕ್ಷಣಗಳು ಸಂಸ್ಕೃತ ಕಾವ್ಯಗಳಲ್ಲಿಯೂ ಕಂಡು ಬರುವವು. ಹಗಲು ಕಮಲಗಳೇ ಅರಳುತ್ತವೆಂಬುದೂ ರಾತ್ರಿ ಕುಮುದಗಳು ಅರಳುತ್ತವೆಂಬುದೂ 'ಲೋಕವಿಖ್ಯಾತ ವಿಷಯವಲ್ಲ.'

ಆದರೆ ಕೇವಲ ರೂಢಿವಶದಿಂದ ಮೆರೆಯುವ ಪರಂಪರಾಗೀತ. ಚಾತಕವು ಮಳೆಯ ನೀರಿಗಾಗಿ ಕಾದುನಿಲ್ಲುವುದೂ, ಚಕೋರವು ಬೆಳ್ದಿಂಗಳನ್ನು ಕುಡಿಯುವದೂ ಜಗತ್ತಿನ ಅನುಭವಕ್ಕೆ ಬಾರದ ವಿಷಯ. ಬರಿಕಲ್ಪನೆಯ ಸೊಗಸಿಗಾಗಿ ಸಂಪ್ರದಾಯವಶವಾದುದಾಗಿವೆ.

ಇದನ್ನೇ ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವ ಗ್ರಂಥದಲ್ಲಿ ಈ ರೀತಿಯಾಗಿ ಹೇಳಿದ್ದಾನೆ.

ವಾರಿಧಿ ಪರ್ವತಂ, ಪುರಮಧೀಶ್ವರನುದ್ವಹನಂ ಕುಮಾರನಂ ।
ಭೋರುಹ ವೈರಿ ಮಿತ್ರರುದಯುಂ ಋತುನಂದನವಂಬು ಸೀಧುಕಾಂ ॥
ತಾರತಿ ಚಿಂತೆ, ಮಂತ್ರಚರಯಾನ ವಿರೋಧಿ ಜಯಂಗಳೆಂಬಿವಂ ।
ಸೂರಿಗಳಂಗವೊಂದು ಕೃತಿಯೊಳ್ ಪದಿನೆಂಟು ಮನೆಯ್ದೆ ಬಣ್ಣಿಪರ್ ॥ ೧ ॥

ಸೂಕ್ತಿಸುಧಾರ್ಣವ

**ಮಹಾಕಾವ್ಯಗಳನ್ನು** ಬರೆಯುವವನು ಈ ಎಲ್ಲ ಸಾಂಪ್ರದಾಯಗಳನ್ನು ಅನುಸರಿಸಲೇಬೇಕು. ಇಲ್ಲವಾದರೆ ಅದು **ಮಹಾಕಾವ್ಯವಾಗಲಾರದು.**

ಮೇಲಿನ ಮಾತು ಸ್ಪಷ್ಟವಾದರೆ, ನಮ್ಮ ಚಂಪೂ ಕಾವ್ಯಗಳಲ್ಲಿ ಕಾಣುವ ಅನುಕರಣಕ್ಕೆ ಅರ್ಥವಾಗುವುದು. ಮಹಾ ಕಾವ್ಯವನ್ನು ಬರೆಯಲು ಹೊರಟ ಪ್ರತಿಯೊಬ್ಬನೂ ಮೇಲಿನ ಲಕ್ಷಣಗಳನ್ನು ಅನುಸರಿಸಿ ಬರೆಯಬೇಕಾಗಿದ್ದುದರಿಂದ ಎಲ್ಲರ ಕಾವ್ಯಗಳಲ್ಲಿಯೂ ಒಂದು ಬಗೆಯ ಧಾಟಿಯು ಕಾಣುವುದು ಸ್ವಾಭಾವಿಕವು. ಅದು ಅನುಕರಣವಲ್ಲ. **ಸಾಂಪ್ರದಾಯಪರಿಪಾಲನೆ.**

ಸಂಸ್ಕೃತದಲ್ಲಿ ಪಾಂಡಿತ್ಯವುಳ್ಳವರಾಗಿಯೂ ಸಂಸ್ಕೃತದ ರಾಮಾಯಣ, ಭಾರತ, ಭಾಗವತ, ಮಹಾಕಾವ್ಯ, ನಾಟಕಗಳಿಗೆ ಮರುಳಾಗಿ ಸಂಸ್ಕೃತದಂತೆ ಕನ್ನಡದಲ್ಲಿಯೂ **ಮಹಾಕಾವ್ಯಗಳನ್ನು** ಬರೆಯಬೇಕೆಂಬ ಉದ್ದೇಶದಿಂದ ಕನ್ನಡಕ್ಕೆ ಸಂಸ್ಕೃತವನ್ನು ಬೆರೆಯಿಸಿ,ಸಂಸ್ಕೃತ ಛಂದಸ್ಸಿಗೆ ಕನ್ನಡವು ಸರಿಹೋಗುವಂತೆ ಹದಮಾಡಿ, ಸಂಸ್ಕೃತ ಛಂದಸ್ಸನ್ನೇ ತಮ್ಮ ಕಾವ್ಯಗಳಲ್ಲಿ ಮುಖ್ಯವಾಗಿ ಉಪಯೋಗಿಸಿ, ಕಾವ್ಯಗಳನ್ನು

ಬರೆಯಲುಪಕ್ರಮಿಸಿದರು. ಕನ್ನಡಕ್ಕೆ ಆದಿ ಕವಿಯಾದ ಪಂಪನ ಆದಿ ಪುರಾಣ, ವಿಕ್ರಮಾರ್ಜುನ ವಿಜಯಗಳಲ್ಲಿಯೂ, ಸಂಸ್ಕೃತ ಛಂದಸ್ಸಿಗೇ ಪ್ರಾಧಾನ್ಯತೆ ಇದೆ, ಕನ್ನಡಕ್ಕಲ್ಲ. ಚಂಪೂಗ್ರಂಥಕರ್ತರೆಲ್ಲರೂ ಇದೇ ಪದ್ಧತಿಯನ್ನನುಸರಿಸಿದ್ದಾರೆ. ಶಾರ್ದೂಲವಿಕ್ರೀಡಿತ, ಮತ್ತೇಭ ವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ಧರೆ, ಮಹಾಸ್ರಗ್ಧರೆ ಮತ್ತು ಕಂದಗಳೇ ಈ ಕಾವ್ಯಗಳಲ್ಲಿ ಉಪಯೋಗಿಸಲ್ಪಟ್ಟಿವೆ.

ಇವು ಸಂಸ್ಕೃತ ವೃತ್ತಗಳಾದರೂ ಇವುಗಳಿಗೆ ಕನ್ನಡದ **ಪ್ರಾಸ ಬಂಧದ** ಮುದ್ರೆಯನ್ನೊತ್ತಿ ಕನ್ನಡಕ್ಕೆ ಒಗ್ಗುವಂತೆ ಒಣ್ಣ ಕೊಡಬೇಕಾಯಿತು.

ಗದ್ಯ ಪದ್ಯಗಳೆರಡೂ ಇರತಕ್ಕ ಮಿಶ್ರಕಾವ್ಯವೇ **ಚಂಪೂ**ವೆನಿಸುವದು. ಕಥೆಯ ಪ್ರವಾಹವನ್ನು ಮುಂದೋಡಿಸುವದಕ್ಕಾಗಲೀ, ಒಂದು ಸನ್ನಿವೇಶವನ್ನು ವರ್ಣಿಸುವದಕ್ಕಾಗಲೀ, ವಚನಗಳನ್ನು ಉಪಯೋಗಿಸುವದುಂಟು. ಈ ವಚನಗಳಲ್ಲಿ ಸಣ್ಣಪುಟ್ಟ ವಾಕ್ಯಗಳಿರವೆ ಅನೇಕ ಸಮಾಸಪದಗಳಿಂದ ಕೂಡಿದ ಉದ್ದುದ್ದ ವಾಕ್ಯಗಳಿರುತ್ತವೆ. ಒಮ್ಮೊಮ್ಮೆ ಇಡಿ ವರ್ಣನೆಯೇ ಒಂದೇ ವಾಕ್ಯದ್ದಿರುತ್ತದೆ. ಅಲ್ಲದೆ ಕೆಲವು ವರ್ಣನೆಗಳನ್ನು ರಗಳೆಗಳಿಂದ ಮಾಡಿದ್ದು ಕಂಡುಬರುತ್ತದೆ. ವೀರಶೃಂಗಾರ ಶಾಂತರಸಗಳಲ್ಲಿ ಯಾವದಾದರೊಂದು ರಸವು ಪ್ರಾಧಾನ್ಯವಾದದ್ದು. ಈ ಕಾವ್ಯಗಳಲ್ಲಿ ಕಂಡು ಬರುತ್ತದೆ. ಸಂಸ್ಕೃತ ಮಿಶ್ರಣವೇ ಹೆಚ್ಚು

ಈ ಚಂಪೂಕಾವ್ಯಗಳಲ್ಲಿ ಇಬ್ಬಗೆಯ ಗ್ರಂಥಗಳು ಕಾಣುತ್ತವೆ. ಮತಪ್ರಚಾರಕ ಪುರಾಣಗಳು ಮತ್ತು ಲೌಕಿಕ ಕಾವ್ಯಗಳು. ಎರಡೂ ಪ್ರೌಢವಾದ, ಗಂಭೀರವಾದ ಕಾವ್ಯಗಳೇ. ಅವುಗಳ ಉದ್ದೇಶಗಳು ಮಾತ್ರ ಭಿನ್ನವಾಗಿವೆ.

ಪುರಾಣಗಳು:—ಮತಪ್ರಚಾರಕ್ಕಾಗಿ ಬರೆದ ಗ್ರಂಥಗಳಿವು. ಇವುಗಳಲ್ಲಿ ಜೈನ ಹಾಗು ಶೈವ ಪುರಾಣಗಳು ಕಂಡು ಬರುತ್ತವೆ.

**ಜೈನ ಪುರಾಣ**ಗಳಲ್ಲಿ ಜಿನಮಹಾತ್ಮೆಯೂ ಜೈನಮತ ಪ್ರಕ್ರಿಯೆಗಳೂ ಆಚಾರವಿಚಾರಗಳೂ ವರ್ಣಿತವಾಗಿವೆ. ಈ ಪುರಾಣಗಳಿಗೂ ಕಟ್ಟು ಕಟ್ಟಳೆಗಳುಂಟು. ತೀರ್ಥಂಕರರು ಹಿಂದಣ ಜನ್ಮಗಳಲ್ಲಿ ತಪಶ್ಚರ್ಯ

ಗೆಯುತ್ತ, ಮುಕ್ತರಾಗುತ್ತ, ಈ ಜನ್ಮದಲ್ಲಿ ಹೇಗೆ ತೀರ್ಥಂಕರರಾದರೆಂಬ ವರ್ಣನೆಗಳೂ, ಪ್ರತಿಯೊಬ್ಬ ತೀರ್ಥಂಕರರ ಪಂಚಮಹಾಕಲ್ಯಾಣಗಳ ವರ್ಣನೆಗಳೂ, ಕಂಡು ಬರುತ್ತವೆ. ಈ ಪುರಾಣದ ಕಥೆಗಳೆಲ್ಲ ಸ್ವಲ್ಪ ಹೆಚ್ಚುಕಡಿಮೆ, ಒಂದೇ ರೀತಿಯಾಗಿವೆ. ಇಲ್ಲಿ ಕವಿಗಳಿಗೆ ಹೆಚ್ಚು ಸ್ವಾತಂತ್ರ್ಯವಿಲ್ಲ. ವರ್ಣನೆಗಳಲ್ಲಿ ಮಾತ್ರ ಕವಿಗಳ ಯೋಗ್ಯತೆಯನ್ನು ಕಾಣಬಹುದು. ತೀರ್ಥಂಕರರ ಹೆಸರು, ಬಣ್ಣ, ನಿಲುವುಗಳಲ್ಲಿ ಬದಲಾವಣೆಗಳನ್ನು, ನೋಡಬಹುದು. ಆದರೆ ಕಥಾಸರಣಿಯಲ್ಲಿಲ್ಲ. ಆದುದರಿಂದ ಯಾವುದೊಂದು ಪುರಾಣವನ್ನು ಓದಿ ತಿಳಿದುಕೊಂಡರೆ, ಉಳಿದೆಲ್ಲವುಗಳ ಸ್ವರೂಪವನ್ನು ಸುಲಭವಾಗಿ ಊಹಿಸಬಹುದು.

ಪಂಪನು **ಆದಿ ಪುರಾಣದಲ್ಲಿ** ಪ್ರಥಮ ತೀರ್ಥಂಕರನಾದ **ವೃಷಭನನ್ನು** ವರ್ಣಿಸಿದ್ದಾನೆ. ಈ ಕಥೆಯನ್ನು ತನ್ನ ವರ್ಣನಾವೈಖರಿಯಿಂದ, ಅಪೂರ್ವವಾದ ಪದಪ್ರಯೋಗದಿಂದ, ಬಹುರಸವತ್ತಾಗಿ ಹೇಳಿದ್ದಾನೆ. ಆದುದರಿಂದಲೇ ಮುಂದಿನ ಜೈನ ಕವಿಗಳೆಲ್ಲ 'ಜಿನಸಮಯದೀಪಕ'ನೆಂದು ಪಂಪನನ್ನು ಕರೆದಿದ್ದಾರೆ. ರನ್ನನು ಎರಡನೇ ತೀರ್ಥಂಕರನ ಚರಿತ್ರೆಯನ್ನು **'ಅಜಿತನಾಥಪುರಾಣ'**ವೆಂದು ಬರೆದಿದ್ದಾನೆ. ಕವಿಯ ಕವಿತಾ ಚಾತುರ್ಯವನ್ನು ಇಲ್ಲಿ ಕಾಣಬಹುದು. ನಾಗಚಂದ್ರನ **ಮಲ್ಲಿನಾಥ ಪುರಾಣ** ಹಾಗು **ರಾಮಚಂದ್ರಚರಿತ್ರಪುರಾಣ,** ನೇಮಿಚಂದ್ರನ **ಅರ್ಧನೇಮಿ ಪುರಾಣ,** ಜನ್ನನ **ಅನಂತನಾಥ ಪುರಾಣ,** ನಯಸೇನನ **ಧರ್ಮಾಮೃತ** ಮೊದಲಾದವುಗಳು ಪ್ರಸಿದ್ಧವಾಗಿವೆ.

ಜೈನರು ಬರೆದಂತೆಯೇ, ವೀರಶೈವರೂ ಮತಪ್ರಚಾರಕ್ಕಾಗಿಯೇ ಬರೆದುದು ಕಂಡುಬರುತ್ತದೆ. ಇವುಗಳಲ್ಲಿ ಶಿವಭಕ್ತಿ, ಶಿವಶರಣರ ಚರಿತ್ರೆಗಳು ವರ್ಣಿಸಲ್ಪಟ್ಟಿವೆ. ಹರಿಹರನ **ಗಿರಿಜಾಕಲ್ಯಾಣವೂ** ಸುರಂಗಕವಿಯ **ತ್ರಿಷಷ್ಠಿ ಪುರಾತನರ ಚರಿತ್ರೆ,** ವೀರಭದ್ರನ **ವೀರಭದ್ರ ವಿಜಯ** ಷಡಕ್ಷರಿಯ **ಶಬರಶಂಕರ ವಿಲಾಸ,** ಮತ್ತು **ವೃಷಭೇಂದ್ರ ವಿಜಯಗಳು** ಪ್ರಸಿದ್ಧವಾದುವು. ಇವುಗಳಲ್ಲಿ ಪುರಾತನರ ಲೀಲೆಗಳೂ ವೀರಶೈವ ಮತದ ಮಹಾತ್ಮ್ಯವೂ ವರ್ಣಿಸಲ್ಪಟ್ಟಿವೆ.

ಈ ಕಾಲದ ಒಂದು ಪ್ರಧಾನ ಲಕ್ಷಣವೆಂದರೆ, **ಅನ್ಯಮತ ಸಹನೆ.** ೯-೧೦ನೇ ಶತಮಾನಗಳಲ್ಲಿ, ರಚಿತವಾದ ಯಾವ ಪುರಾಣಗಳಲ್ಲಿಯೂ, ಅನ್ಯಮತ-ದೂಷಣೆಯು ಕಾಣುವದಿಲ್ಲ. ಆದರೆ ೧೨ನೇ ಶತಮಾನದಲ್ಲಿ, ಪರಮತ-ಸಹಿಷ್ಣುತೆಯು ಕಡಿಮೆಯಾಗಿ, ಅನ್ಯಮತ-ದೂಷಣೆಗೆ, **ಧರ್ಮಾಮೃತದಿಂದಲೇ,** ಪ್ರಾರಂಭವಾಗುತ್ತದೆ. **ಧರ್ಮಪರೀಕ್ಷೆ**ಯನ್ನು ಬರೆದ ಬ್ರಹ್ಮಶಿವನೂ, **ಸಮಯ ಪರೀಕ್ಷೆ**ಯನ್ನು ಬರೆದ ವೃತ್ತವಿಲಾಸನೂ ಪರಧರ್ಮವನ್ನು ಅಪಹಾಸ್ಯಮಾಡುವದನ್ನೇ ಇಟ್ಟುಕೊಂಡಂತೆ, ಕಂಡುಬರುತ್ತದೆ. ಇಂತಿದು ಪುರಾಣಗಳ ವಿಷಯ.

**ಲೌಕಿಕ ಕಾವ್ಯಗಳು,** ಕವಿಗಳ ವಿಹಾರಭೂಮಿ. ಮತದ ಕಟ್ಟಿನಿಂದ ಮುಕ್ತರಾದ ಕವಿಗಳು, ಮುಕ್ತಗಗನದಲ್ಲಿ ವಿಹಗಗಳು ವಿಹರಿಸುವಂತೆ, ತಮ್ಮ ಕಲಾನೈಪುಣ್ಯವನ್ನೆಲ್ಲ ಮನಮೆಚ್ಚುವಂತೆ, ತೋರಿಸಿದ್ದಾರೆ. ಈ ಚಂಪೂ ಕಾವ್ಯಗಳು ಕನ್ನಡ ಸಾಹಿತ್ಯಕ್ಕೇ ಕೀರ್ತಿಪ್ರಾಯವಾಗಿವೆ.

ಮಹಾ ಕಾವ್ಯಗಳನ್ನು ಬರೆಯಲು ಹೊರಟ ಇವರು ತಮ್ಮ ಕಥಾವಸ್ತುಗಳನ್ನು ರಾಮಾಯಣ, ಮಹಾಭಾರತ,ಆಗಮಗಳಿಂದ ಎತ್ತಿದ್ದಾರೆ. ಆದರೆ ಜೈನ ಕವಿಗಳಿಗೆ ಅವುಗಳಲ್ಲಿಯ ವೈದಿಕ ಪರಂಪರೆಗಳೂ, ದೇವತೆಗಳೂ, ಮಾನ್ಯವಿದ್ದಂತೆ ತೋರುವದಿಲ್ಲ. ಯಾಕಂದರೆ ಪಂಪನು ತನ್ನ ಭಾರತದ ಕಥಾಸಂವಿಧಾನದಲ್ಲಿ, ಎಷ್ಟೋ ವ್ಯತ್ಯಾಸಗಳನ್ನು ಮಾಡಿದ್ದಾನೆ.

ಮಹಾಭಾರತದಲ್ಲಿ ಶ್ರೀಕೃಷ್ಣನು ಸೂತ್ರಧಾರ. ಪಂಪಭಾರತದಲ್ಲಿ ಕೃಷ್ಣನಿಗೆ ಹೆಚ್ಚು ಪ್ರಾಧಾನ್ಯವಿಲ್ಲ. ಅವನು ಅಪ್ರತಿಮ ಬುದ್ಧಿಶಾಲಿಯಾದ ಪಾಂಡವರ ಪರಮಮಿತ್ರ. ಪಾಂಚಾಲಿಯು ಸಕಲ ಪಾಂಡವರ ಪತ್ನಿಯಲ್ಲ. ಒಬ್ಬನ ಹೆಂಡತಿ. ಅರ್ಜುನನೇ ಮುಖ್ಯ ನಾಯಕ. ಪಂಪನು ಪ್ರಧಾನ ನಾಯಕರನ್ನು ವರ್ಣಿಸುವಾಗ ಕೃಷ್ಣನನ್ನು ಹೇಗೆ ಹಿಂದಕ್ಕೆ ಸರಿಸುವನೆಂಬುದು ಕೆಳಗಿನ ಪದ್ಯದಿಂದ ತಿಳಿಯುವಂತಿದೆ.

ಛಲದೊಳ್ ದುರ್ಯೋಧನಂ, ನನ್ನಿಯೊಳಿನಿತನಯಂ, ಗಂಡಿನೊಳ್
ಭೀಮಸೇನಂ ।
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ ।

ಬಲದೊಳ್ ಕುಂಭೋದ್ಭವಂ, ಸಾಹಸದ ಮಹಿಮೆಯೊಳ್ ಫಲ್ಗುಣಂ
ಧರ್ಮದೊಳ್ ನಿ |
ರ್ಮಲ ಚಿತ್ತಂ ಧರ್ಮಪುತ್ರಂ, ಮಿಗಿಲವರ್ಗಳಿನೀಭಾರತಂ ಲೋಕ
ಪೂಜ್ಯಂ ||

ಮದ್ರೇಶನ ಹೆಸರು ಹೇಳುವ ಪಂಪನಿಗೆ, ಕೃಷ್ಣನ ಹೆಸರು ಹೇಳಲು ಬರುವದಿಲ್ಲವೇ! ಹಾಗಲ್ಲ. ಕೃಷ್ಣನು ಅವತಾರಿಕ ಪುರುಷನೂ ಪರಮಾತ್ಮನೂ ಎಂಬ ವೈದಿಕ ಮತತತ್ವವನ್ನು ಹೇಳುವದು ಬೇಡವಾಗಿ ಜಾಣ್ಮೆಯಿಂದ ಕೃಷ್ಣನನ್ನು ಕಣ್ಮರೆಮಾಡಿದ್ದಾನೆ.

ಇದೇ ರೀತಿ, ಪಂಪರಾಮಾಯಣದಲ್ಲಿ. ವೈದಿಕ ಸಂಪ್ರದಾಯಗಳಾದ ಪುತ್ರಕಾಮೇಷ್ಠಿಯಜ್ಞದ, ವಿಶ್ವಾಮಿತ್ರ, ವಶಿಷ್ಠ ಮೊದಲಾದ ವೈದಿಕ ಧರ್ಮದ, ಋಷಿಗಳ ಪ್ರಸ್ತಾಪವೇ ರಾಮಾಯಣದಲ್ಲಿ ಕಾಣುವದಿಲ್ಲ. ಇದರಲ್ಲಿ ದಶರಥನಿಗೆ ನಾಲ್ವರು ಪತ್ನಿಯರು. ರಾಮನು ರಾವಣನನ್ನು ಕೊಲ್ಲುವದಿಲ್ಲ, ಲಕ್ಷ್ಮಣನು. ಅವನೇ ಮುಖ್ಯ ಪಾತ್ರ.

ಹೀಗೆ ಜೈನ ಕವಿಗಳು, ರಾಮಾಯಣ ಮಹಾಭಾರತಗಳನ್ನು, ತಮ್ಮ ಮತಕ್ಕೆ ಅನುಕೂಲವಾಗುವಂತೆ, ಅವುಗಳಿಗೆ ರೂಪಗೊಟ್ಟು ಬಣ್ಣಿಸಿದ್ದಾರೆ. ಇದಲ್ಲದೆ ಕವಿಗಳು, ತಮಗೆ ಆಶ್ರಯ ದಾತರಾದ ಅರಸರನ್ನೂ, ಅರ್ಜುನನನ್ನೂ, ಭೀಮನನ್ನೂ ಮಾಡಿಕೊಂಡು, ಕಾವ್ಯಗಳನ್ನು ರಚಿಸಿದ್ದಾರೆ. ಪಂಪನು ತನ್ನೊಡೆಯನಾದ ಅರಿಕೇಸರಿಯನ್ನೂ ರನ್ನನು ಸೂರ್ಮಡಿ ತೈಲಿಪನನ್ನೂ ತಮ್ಮ ತಮ್ಮ ಕಥಾನಾಯಕರನ್ನು ಮಾಡಿಕೊಂಡ ಸಂಗತಿಯು ಪ್ರಸಿದ್ಧವೇ ಇದೆ.

ಪಂಪನ **ವಿಕ್ರಮಾರ್ಜುನವಿಜಯ,** (೯೪೧) ರನ್ನನ **ಗದಾಯುದ್ಧ** (೯೯೩) ನೇಮಿಚಂದ್ರನ **ಲೀಲಾವತಿ,** (೧೧೭೦) ಜನ್ನನ **ಯಶೋಧರ ಚರಿತ್ರೆ,** (೧೨೦೯) ಅಂಡಯ್ಯನ **ಕಬ್ಬಿಗರಕಾವ,** (೧೨೩೫) ಹರಿಹರನ **ಗಿರಿಜಾಕಲ್ಯಾಣ,** (೧೧೬೫) ಚಂದ್ರಕವಿಯ **ವಿರೂಪಾಕ್ಷಸ್ಥಾನ,** (೧೪೩೦) ಪ್ರಭುಗನ **ಚೂಡಾರತ್ನ,** (೧೩೭೦) ಷಡಕ್ಷರಿಯ **ರಾಜಶೇಖರವಿಳಾಸ,** (೧೬೫೫) ನಾಗವರ್ಮನ **ಕರ್ನಾಟಕ ಕಾದಂಬರಿ,** (೯೯೦) ಚಂದ್ರರಾಜನ **ಮದನತಿಲಕ,** (೧೦೭೯) ದುರ್ಗಸಿಂಹನ

**ಪಂಚತಂತ್ರ,** (೧೧೪೫) ರುದ್ರಭಟ್ಟನ **ಜಗನ್ನಾಥ ವಿಜಯ,** (೧೧೮೦) ದೇವಕವಿಯ **ಕುಸುಮಾವಳಿ,** (೧೨೦೦) ಚೌಂಡರಸನ **ಅಭಿನವ ದಶ ಕುಮಾರ ಚರಿತ್ರ,** (೧೩೦೦) ಕವಿಮಲ್ಲನ **ಮನ್ಮಥವಿಜಯ,** ವೆಂಕಟ ಕವಿಯ **ವೆಂಕಟೇಶ ಪ್ರಬಂಧ,** (೧೬೫೦) ತಿರುಮಲಾರ್ಯರ **ಚಿಕ್ಕ ದೇವರಾಜ ವಿಜಯ,** ಚಿಕುಪಾಧ್ಯಾಯರ **ಕಮಲಾಚಲ ಮಹಾತ್ಮೆ** ಇತ್ಯಾದಿ ಚಂಪೂಗ್ರಂಥಗಳು ಅತ್ಯಂತ ಪ್ರಸಿದ್ಧವಾಗಿವೆ. ಈ ಎಲ್ಲ ಕಾವ್ಯಗಳು ಪ್ರೌಢವಾದ ಉದ್ಗ್ರಂಥಗಳು. ರಸ, ಅಲಂಕಾರ, ಕವಿ ಸಮಯ, ಚಮತ್ಕೃತಿ, ಭಾಷೆಯಕಟ್ಟು, ಗಂಭೀರತೆಗಳಲ್ಲಿ ಮಿಗಿಲಾಗಿವೆ.

ಸಂಪ್ರದಾಯ ಪರಿಪಾಲನೆಯಿದ್ದರೂ ಕವಿಗಳ ಕಾವ್ಯಕುಶಲತೆಯೂ, ವೈಶಿಷ್ಟ್ಯವೂ ಅವರ ವರ್ಣನಾಶೈಲಿಯಲ್ಲಿ ಪ್ರತಿಬಿಂಬಿತವಾಗಿವೆ.

### ಮೂಡಗಾಳಿಯ ವರ್ಣನೆ.

ಅಣಿಯರವಾಡಿ ಮೂಡಗಡಲೋಳ್ ತೆರೆಮಾಲೆಯ ನೆತ್ತಿದೇವವಾ ।
ರಣಕರ ಶೀಕರೋತ್ಕರಮನಾಂತು ಶಚೀ ರಮಣಾಭಿಷೇಕವಾ ॥
ಕಣ ನಿಕುರುಂಬಮಂತಳೆದು ಬಂದೆಸಗಿತ್ತತಿ ಶೈತ್ಯಕಾರಣಂ
ಪ್ರಣಯವಿಮುಕ್ತವಲ್ಲಭ ವಿದಾರಣವಿಂದ್ರದಿಶಾಸಮೀರಣಂ ॥

—**ಜಗನ್ನಾಥ ವಿಜಯ.**

ಸುರಕರಿ ಕರ ಮುಕ್ತಾಂಭಃಕಣಂ ಮಂಜಿದೆಂಬಂ ।
ತಿರೆ ತಳೆದು ಶಿಖಾವದ್ಗರ್ವವಂನುಗ್ಗಿ ನಿಲಂ ।
ಬುರುಹ ಸುರಭಿಯೊಂದುತ್ತೈದಿದಂ ಮಾಗೆ ಬರ್ಪಂ ।
ತಿರೆಧೃತ ಘನಕಾರಾಮೋದಸಾರಂ ಸಮೀರಂ ॥

—**ರಾಜಶೇಖರ ವಿಲಾಸ.**

ಮೇಲಿನ ಎರಡೂ ಪದ್ಯಗಳು ಒಂದೇ ವೃತ್ತ ಒಂದೇ ವಸ್ತುಗಳ ವರ್ಣನೆಗಳಿದ್ದರೂ ಅವರಲ್ಲಿರುವ ಭಾವನೆ, ಕಲ್ಪನೆಯ ಕೆಲಸಗಳಲ್ಲಿ ಅವರ ವ್ಯಕ್ತಿತ್ವವು ತೋರುವದು. ಚಂಪೂಕಾವ್ಯಗಳ ವಿವೇಚನೆಯನ್ನು ಮಾಡಿದ್ದಾಯಿತು. ಮುಂದಣ ಹೆಜ್ಜೆಯಾದ ರಗಳೆಗಳ ವಿಷಯವನ್ನು ಮುಂದಿನ ಪ್ರವಾಹದಲ್ಲಿ,

## ರಗಳೆಗಳು.

**ಈ ರಗಳೆಗಳ** ರಾಮಾಯಣವು ಒಹು **ದೊಡ್ಡದಿದೆ.** ನಾಟಕದಲ್ಲಿ ಪರದೆಯನ್ನು ಎತ್ತಿದೊಡನೆ, ಒಂದು ದೃಶ್ಯವು ಹೋಗಿ ಹೊಸದೊಂದು ದೃಶ್ಯವೇ ಕಣ್ಣಿಗೆ ಬೀಳುವಂತೆ, ೧೨ ನೇ ಶತಮಾನದ ಪ್ರಾರಂಭಕ್ಕೆ ನಮ್ಮ ಸಾಹಿತ್ಯದಲ್ಲಿ ಒಮ್ಮೆಲೆ **ರಗಳೆಗಳು** ಕಣ್ಣಿಗೆ ಬೀಳುತ್ತವೆ. **ಚಂಪೂ ಕಾವ್ಯ**ಗಳು ಮಾಯವಾಗುತ್ತವೆ. ಸಂಸ್ಕೃತ ಛಂದಸ್ಸು ಕಾಣದಾಗುತ್ತದೆ. ಸಾಹಿತ್ಯವು ಹೊಸ ಧಾಟಿಯಲ್ಲಿ ನಡೆದುದು ಕಂಡುಬರುತ್ತದೆ. ಏನಿದು? ಒಮ್ಮೆಲೆ ಈ ಬದಲಾವಣೆಗಳಾಗಲು ಕಾರಣಗಳಿವೆಯೋ ಎಂಬುದು ಸಹಜವಾಗಿ ತಲೆ ಎತ್ತುತ್ತದೆ. ಇವೇ ಕಾರಣಗಳಿವೆ. ಎಂದೇ ನಮ್ಮ ಉತ್ತರ.

೧೨ ನೇ ಶತಮಾನವು, **ಕನ್ನಡ ಸಾಹಿತ್ಯದ ಸ್ವಾತಂತ್ರ್ಯದ ಯುಗವು.** ಅವೈದಿಕವಾದ ಜೈನಮತದ ವಿರುದ್ಧವಾಗಿಯೂ, ಮಡಿವಂತ ದೃಷ್ಟಿಯುಳ್ಳ ವೈದಿಕ ಸನಾತನಿಗಳ ವಿರುದ್ಧವಾಗಿಯೂ, ಬಂಡೆಬ್ಬಿಸಿದ ಕಾಲ. ಶ್ರೀ ಬಸವೇಶ್ವರನು, **ಧಾರ್ಮಿಕ ಕ್ಷೇತ್ರದಲ್ಲಿ** ಕ್ರಾಂತಿಯನ್ನುಂಟುಮಾಡಿದನು. ಧಾರ್ಮಿಕ, ಸಾಮಾಜಿಕ ಸಂಪ್ರದಾಯಗಳಿಂದ ಜನತೆಯನ್ನು ಬಿಡುಗಡೆಮಾಡಿದನು. ವೈದಿಕ ಧರ್ಮದ ಮುಕ್ತಿಮಾರ್ಗವನ್ನು ಸರ್ವ ಮಾನವರಿಗೆ ತೆರೆದುಬಿಟ್ಟನು. ಇದರಿಂದ ಎಲ್ಲ ಕ್ಷೇತ್ರಗಳಲ್ಲಿಯೂ ದಿವ್ಯಶಕ್ತಿಯ ಸಂಚಾರವಾಯಿತು. ಸಾಮಾಜಿಕ ಹಾಗು ಧಾರ್ಮಿಕ ದಬ್ಬಾಳಿಕೆಯಿಂದ ಒತ್ತಲ್ಪಟ್ಟ ಆತ್ಮಶಕ್ತಿಯು ಹೊರಹೊಮ್ಮಿತು. ಕನ್ನಡ ಜನಾಂಗದಲ್ಲೆಲ್ಲ ಹೊಸಶಕ್ತಿಯು ಬೆಳಗಹತ್ತಿತು. ವೀರ ಜೀವನವು ಉದಯವಾಯಿತು. **ಧರ್ಮ ಹಾಗು ಸಾಮಾಜಿಕ ಸ್ವಾತಂತ್ರ್ಯವೇ** ಈ ಕ್ರಾಂತಿಯಘೋಷ. ಜನಸಾಮಾನ್ಯವೇ ಈ ಕ್ರಾಂತಿಯ ಸಾಧನ. ಹೀಗಾಗಿ, ಜನತೆಯಲ್ಲೆಲ್ಲ ಅಲ್ಲೋಲಕಲ್ಲೋಲವಾಗಿ ಎಲ್ಲಿ ನೋಡಿದಲ್ಲಿ ಪ್ರತಿಭಟನೆಯೂ, ನವಸೃಷ್ಟಿಯ ನಿರ್ಮಾಣವೂ ಕಣ್ಣಿಗೆ ಬೀಳಹತ್ತಿತು. ಈ ಜಾಗ್ರುತಿಯ-ಕ್ರಾಂತಿಯ, ಪರಿಣಾಮವು ಕನ್ನಡ ಸಾಹಿತ್ಯದ ಮೇಲೆ ಆಗದೆ ಹೇಗೆ ಉಳಿಯುವದು?

## ಕನ್ನಡ ಯುಗ.

೧೨ ನೇಶತಮಾನದಲ್ಲಿ, ಕನ್ನಡಸಾಹಿತ್ಯವಾಹಿನಿಯು, ತನ್ನ ಪಾತ್ರವನ್ನು ಬದಲಿಸಿ, ಬೇರೊಂದು ನಿಟ್ಟಿಗೆ, ಹೊಸದೊಂದು ಓಟದಲ್ಲಿ, ಹೊಸ ಹೊಳಪಿನಿಂದ, ಹರಿಯುವದನ್ನು ನೋಡುತ್ತೇವೆ.

ಇದು ವರೆಗಿನ ಸಾಹಿತ್ಯದ ದೃಷ್ಟಿಯೆಲ್ಲ ಸಂಸ್ಕೃತದ ಕಡೆಗೆ. ಸಂಸ್ಕೃತ ಸಾಹಿತ್ಯದ ಸಂಗ್ರಹ, ಇಲ್ಲವೆ ಅನುಕರಣಗಳಲ್ಲಿಯೇ ನಮ್ಮ ಕವಿಗಳಿಗೆ ಆನಂದ. ಅವರ ದಾರಿಯೇ ಇವರಿಗೆ ಹೆದ್ದಾರಿ. ಅವರ ಛಂದಸ್ಸೇ ಇವರ ಛಂದಸ್ಸು. ಹೀಗೆ ನಮ್ಮ ಕವಿಗಳು ಸಂಸ್ಕೃತ ಸಾಹಿತ್ಯಕ್ಕೆ ಮುಗ್ಧರಾಗಿ **ತಮ್ಮತನವನ್ನು** ಕಳೆದುಕೊಂಡು ಬಿಟ್ಟಿದ್ದರು. ಮುನ್ನಿನ ಕಬ್ಬಮನೆಲ್ಲ ಮಿಕ್ಕಿ ಮೆಟ್ಟಬೇಕೆಂಬ ಹಂಬಲದಲ್ಲಿ ಒಬ್ಬರಿಗಿಂತ ಒಬ್ಬರು ತಮ್ಮ ಕಾವ್ಯದಲ್ಲಿ ಸಂಸ್ಕೃತದ ಮೆರಗನ್ನು ತರಲು ಯತ್ನಿಸಿ, ಸಂಸ್ಕೃತ ಪಂಡಿತರಿಂದ ಹೌದೆನಿಸಿಕೊಳ್ಳುವ ಹೌಸಿನಲ್ಲಿ ಸಂಸ್ಕೃತಮಯವಾದ, ಪ್ರೌಢವಾದ ಚಂಪೂ ಕಾವ್ಯಗಳನ್ನು ಬರೆಯುವದರಲ್ಲಿ ಮಗ್ನರಾಗಿದ್ದರು. ಇವು **ಕನ್ನಡ ಕಾವ್ಯಗಳೇ** ಎಂದು ಸಂಶಯ ಬರುವಷ್ಟು, ನಮ್ಮ ಸಾಹಿತ್ಯವು ಸಂಸ್ಕೃತಮಯವಾಯಿತು. ತಾವು ಯಾರು? ತಮ್ಮ ಸಂಸ್ಕೃತಿ ಯಾವುದು? ಯಾರ ಸಲುವಾಗಿ ಬರೆಯುತ್ತಲಿದ್ದೇವೆ, ಎಂಬ ಅರಿವು ಕೂಡ ಉಳಿಯಲಿಲ್ಲ. ಸಂಪೂರ್ಣ ಸಂಸ್ಕೃತದಲ್ಲಿ ನಾಲ್ಕೂ ಚರಣಗಳನ್ನು ಬರೆದು ಕೊನೆಗೆ ಕನ್ನಡ ವಿಭಕ್ತಿಯೊಂದನ್ನು ಸೇರಿಸಿದ ಅನೇಕ ಪದ್ಯಗಳು ಜಗನ್ನಾಥವಿಜಯ ಮೊದಲಾದ ಕಾವ್ಯಗಳಲ್ಲಿ ದೊರೆಯುತ್ತವೆ. ಸಂಪ್ರದಾಯಬದ್ಧವಾಗಿ, ವೈವಿಧ್ಯವಿಲ್ಲದೆ, ಜನಸಾಮಾನ್ಯರಿಗೆ ತಿಳಿಯದ ಸಂಸ್ಕೃತದ ಧಾಟಿಯ ಚಂಪೂ ಕಾವ್ಯಗಳ ರೂಪದಿಂದ, ಕನ್ನಡ ಸಾಹಿತ್ಯವಾಹಿನಿಯು ಅಖಂಡವಾಗಿ ಎರಡು ನೂರು ವರ್ಷಗಳ ವರೆಗೆ ಹರಿಯುತ್ತ ಬಂದಿದ್ದಿತು.

ಇದೇ ಸಮಯಕ್ಕೆ **ಕನ್ನಡದ ಅರುಣೋದಯವಾಯಿತು.** ಸಂಸ್ಕೃತ ಛಾಯೆಗೆ ಇಳಿಗಾಲವು ಪ್ರಾರಂಭವಾಯಿತು. ೧೧ ನೇಶತಮಾನದಲ್ಲಿ **ದುರ್ಗಸಿಂಹನು** ಸಂಸ್ಕೃತದ ಈ ಬೆರಕೆಯನ್ನು ವಿರೋಧಿಸಿ

ದನು. **ನಯಸೇನನು** ಅದಕ್ಕಿಂತ ಒಂದು ಹೆಜ್ಜೆಯನ್ನು ಮುಂದಿಟ್ಟು ಇವರು ಕವಿಗಳೇ ಅಲ್ಲವೆಂದನು.

ಸಕ್ಕದವುಂ ಪೇಳ್ವೊಡೆ ನೆರೆ ।
ಸಕ್ಕದವುಂ ಪೇಳ್ಗೆ ಶುದ್ಧಕನ್ನಡದೋಳ್ ತಂ ।
ದಿಕ್ಕುವುದೇ ಸಕ್ಕದಂಗಳ ।
ತಕ್ಕುದೇ ಬೆರಸಲ್ಕೆ ಘೃತಮುಮಂ ತೈಲಮುಮಂ ॥

**—ನಯಸೇನ.**

ಪೊಸಗನ್ನಡದಿಂ ವ್ಯಾವ ।
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡವುಂ ಚಿಂ ।
ತಿಸಿ ಕೂಡಲಾರದಕ್ಕಟ ।
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೆ ॥

**—ನಯಸೇನ.**

ಈ ರೀತಿಯಾಗಿ ಸಂಸ್ಕೃತದ ವಿರೋಧಕ್ಕೇನೋ ಪ್ರಾರಂಭವಾಯಿತು. ಆದರೆ ಮುಂದಣ ದಾರಿ ಯಾವುದು? ಸಂಸ್ಕೃತವನ್ನು ಸರಿಯಿಸಿ, ಯಾವಧಾಟಿಯಲ್ಲಿ ನಡೆಯಬೇಕು, ಎಂಬ ವಿಚಾರವು-ಅಸಂತೋಷವು, ಮೆಲ್ಲನೆ ಬೆಳೆದ. ೧೨ ನೇ ಶತಮಾನದ ಮಧ್ಯದಲ್ಲಿ, ಸಾಹಿತ್ಯ ಸಾಮ್ರಾಜ್ಯದಲ್ಲಿ ಕ್ರಾಂತಿಯ ರೂಪವನ್ನು ತಾಳಿತು.

## ಸಾಹಿತ್ಯಕ್ಕೆ ಕನ್ನಡದ ಮುದ್ರೆ.

ಬಸವಣ್ಣನವರು ಧರ್ಮಕ್ರಾಂತಿಯನ್ನುಂಟುಮಾಡಿ ‘ **ತನ್ನ ತಾನರಿದೊಡೆ ತನ್ನರಿವೇ ಗುರುವು,** ವೆಂಬ ಮಂತ್ರೋಪದೇಶವನ್ನು ಮಾಡಿದ್ದರಿಂದ ಕನ್ನಡ ಜನಾಂಗವು ಜಾಗೃತವಾಯಿತು. ಅಂತರ್ಮುಖವಾಯಿತು. ಪಾರತಂತ್ರ್ಯದಿಂದ, ಮುಕ್ತರಾಗಬೇಕೆಂಬ ದೃಷ್ಟಿಯು ಎಲ್ಲ ಕ್ಷೇತ್ರಗಳ ಮೇಲೆ ಬಿದ್ದಿತು. ಈ ಬೆಳಕಿನಲ್ಲಿ ಕನ್ನಡ ಸಾಹಿತಿಗಳಿಗೆ ತಮ್ಮ ಸಾಹಿತ್ಯಸ್ವರೂಪದ ದರ್ಶನವಾಯಿತು. ಕಣ್ತೆರೆದರು. ಸಂಸ್ಕೃತದ ಮುದ್ರೆಯನ್ನೊತ್ತಿಸಿಕೊಂಡು ಪರತಂತ್ರವಾದ, ಕನ್ನಡನ್ನು ಕಂಡು ಕಳವಳಗೊಂಡರು. ಸಂಸ್ಕೃತ ಭಾಷೆಯ ಪ್ರಭಾವವನ್ನೂ, ಅದರ ರೀತಿ

ನೀತಿಗಳನ್ನೂ, ಪೂರ್ಣವಾಗಿ ಕಿತ್ತಿ ಬಿಸುಟು ಕನ್ನಡ ಸಾಹಿತ್ಯವನ್ನು ಕನ್ನಡೀಕರಿಸಿ, ಕನ್ನಡ ಧಾಟಿಯಲ್ಲಿಯೇ ನುಡಿಯಿಸಿ, ಅದನ್ನು ಸಮರ್ಥ ಭಾಷೆಯನ್ನಾಗಿಮಾಡಬೇಕೆಂಬ ಹೊಸ ಹುಮ್ಮಸದಿಂದ, ಪ್ರೇರಿತ ರಾಗಿ ಆ ಕಾಲದ ಸಾಹಿತಿಗಳು ಪಣತೊಟ್ಟುದುದು ಕಾಣುತ್ತದೆ.

ಕ್ರಾಂತಿಕಾರಕನಾದ ಬಸವಣ್ಣನೇ ಈ ಕಾರ್ಯಕ್ಕೆ ಮೊದಲು ಮಾಡಿದನು. ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಹಾದಿಯನ್ನು ಹಾಕಿ ಕೊಟ್ಟನು. ಈತನ ಉದ್ದೇಶವು ಮತಪ್ರಚಾರವೇ ಹೊರತು, ಕಾವ್ಯ ರಚನೆಯಲ್ಲ. ಯಾವುದೇ ವಿಷಯವು, ಪ್ರಚಾರವಾಗಬೇಕಾದರೆ, ಅವರಿಗೆ ತಿಳಿಯುವ, ಸುಲಭ ಲಲಿತವಾದ ಭಾಷೆಯಲ್ಲಿಯೇ ಆಗಬೇಕೆಂಬ ಮಾತು ಬಸವಣ್ಣನವರಿಗೆ ಹೊಳೆಯಿತು. ಈ ದಿವ್ಯ ದೃಷ್ಟಿಯು ಕನ್ನಡ ಸಾಹಿತ್ಯದ ಪ್ರವಾಹವನ್ನೇ ಬದಲಿಸಿತು. ಸಾಹಿತ್ಯವು ಪಂಡಿತರ ರಂಜನೆಯನ್ನು ಬಿಟ್ಟು, ಜನತೆಯ ಸೇವೆಗೆ ಸಿದ್ಧವಾಯಿತು. ಸಾಮಾನ್ಯ ಜನತೆಗೆ, ಅರ್ಥವಾಗುವ ರೀತಿಯಲ್ಲಿ, ತನ್ನ ಧರ್ಮಬೋಧೆಯನ್ನೆಲ್ಲ **ವಚನಗಳೆಂಬ** ಸಾಹಿತ್ಯರೀತಿಯಲ್ಲಿ ರಚಿಸಿದನು. ಇವು ಸುಂದರವೂ ಮೋಹಕವೂ ಆಗಿವೆ. ಈ ವಚನ ಪದ್ಧತಿಯು **ಶುದ್ಧ ಕನ್ನಡ ಧಾಟಿ.** ಅನೇಕ ವಚನಗಳನ್ನು ವೃತ್ತಗಂಧಿ* ಯಲ್ಲಿದ್ದುದರಿಂದ ಹಾಡುಗಳಂತೆ ಹಾಡ ಬಹುದು. ಈ ವಚನಗಳು ಕನ್ನಡದಲ್ಲಿ ಹೊಸ ಯುಗವನ್ನೇ ಪ್ರಾರಂಭ ಮಾಡಿದವು.

ಬಸವಣ್ಣನವರಿಂದ, ಪ್ರಾರಂಭಿಸಲ್ಪಟ್ಟ, ನವಮತದ ಪ್ರಚಾರವು, ಜನತೆಯ ಬಳಕೆಯ ಭಾಷೆಯಲ್ಲಿ ಹರಿಯುವುದು ಸ್ವಾಭಾವಿಕ.

ಸಂಪ್ರದಾಯ ಪರಿಪಾಲನೆ, ಭಾಷೆಯ ಕಟ್ಟು. ಸಂಸ್ಕೃತ ಛಂದಸ್ಸುಗಳು, ಜಾನಪದಕ್ಕೆ ಒಗ್ಗದಾದವು. ಮತಪ್ರಚಾರಕರ ದೃಷ್ಟಿ ಯಾದರೋ ಶಿವಭಕ್ತರ ಚರಿತ್ರೆಗಳನ್ನೂ ಶಿವಲೀಲೆಗಳನ್ನೂ ಮನಮೆಚ್ಚು ವಂತೆ ವರ್ಣಿಸಿ ಜನತೆಯಲ್ಲೆಲ್ಲ, ಹಬ್ಬಿಸಬೇಕೆಂಬುದು. ಹಳೆಯ ಸಾಹಿತ್ಯದ ರೀತಿನೀತಿಗಳು ಇದಕ್ಕೆ ಸುಲಭಾನುಕೂಲವೆನಿಸಲಿಲ್ಲ. ಕಟ್ಟುಕಟ್ಟಳೆ

---

* ವೃತ್ತಗಂಧಿ:— ಗದ್ಯವು ಯಾವುದಾದರೊಂದು ಮಾತ್ರಗಣದ ಗತಿಯಲ್ಲಿ ನಡೆಯುತ್ತಿದ್ದರೆ ಅದಕ್ಕೆ ವೃತ್ತಗಂಧಿ ಎನ್ನುವರು.

ಗಳನ್ನು ಸಡಿಲಿಸಬೇಕೆ! ತಮಗೆಲ್ಲಿ ಕವಿಗಳು ಸಾಹಿತಿಗಳು ಅಲ್ಲ ವೆನ್ನುವರೋ ಎಂಬ ಬೆದರಿಕೆ. ಒಂದು ವೇಳೆ ಮುರಿದರೂ ಯಾವ ರೂಪ ಕೊಡಬೇಕೆಂಬುದೊಂದು ಪ್ರಶ್ನೆ. ಕಟ್ಟುಗಳನ್ನು ಸಡಲಿಸಿ, ರಸವತ್ತಾದ ಕಾವ್ಯಗಳನ್ನು ರಚಿಸಲು ಸಾಧ್ಯವಿಲ್ಲವೇ ಎಂಬ ಆತ್ಮ ವಿಶ್ವಾಸಿಗಳ ಕೂಗು. ಇವೇ ಮೊದಲಾದ ವಿಚಾರ ತರಂಗಗಳು, ಸಾಹಿತ್ಯಕ್ಷೇತ್ರ ವನ್ನೆಲ್ಲ ಕಡಡಿದ್ದವು.

ಚಂಪೂಕಾರರು ಕೂಡ ವರ್ಣನೆಗಳ ಸಮಯದಲ್ಲಿ ಸಂಸ್ಕೃತ ಛಂದಸ್ಸನ್ನು ಬಿಟ್ಟು, ವಚನಗಳನ್ನೂ, ರಗಳೆಗಳನ್ನೂ ಉಪಯೋಗಿಸು ತ್ತಿದ್ದರು. ಅವು ಜನಪದ ಸಾಹಿತ್ಯಕ್ಕೆ ಹೊಂದುತ್ತವೆಂದೆನಿಸಹತ್ತಿತು. ಇವುಗಳನ್ನೇ ಬಳಸಿ ಕಾವ್ಯಗಳನ್ನೇಕೆ ಒರೆಯಬಾರದೆಂಬ ಕಲ್ಪನೆಯು ಮೊಳೆದೋರಿತು. ಈ ನಿಟ್ಟಿನಲ್ಲಿ ವಿಚಾರವಮಾಡಿದಂತೆ, ಅವರಿಗೆ ಜನ ಸಾಮಾನ್ಯರಲ್ಲಿ ಮನೆಮನೆಗೆ ಹರಡಿರುವ "ಒನಿಕೆ ವಾಡು" ಮುಂತಾ ದವುಗಳಲ್ಲಿ ತ್ರಿಪದಿ, ಚೌಪದಿ, ರಗಳೆ, ದಂಡಕಗಳು ಇವೆ ಎಂಬುದು ಕಂಡುಬಂದಿತು. ಮನೆ ಮನೆಗೆ ಹೋಗಿ ಮತಪ್ರಚಾರ ಮಾಡಬೇಕೆಂಬ ಅವರಿಗೆ ಇವೇ ಸರ್ವೋತ್ಕೃಷ್ಟ ಭಾವವಾಹಕವೆಂದೆನಿಸ ಹತ್ತಿತು. ಈ ಜನಪದ ಛಂದಸ್ಸಿಗೇ ರೂಪಗೊಟ್ಟು ಎಂದರೆ ದೇಶಿಗೆ ಮಾರ್ಗದ ಸಂಸ್ಕಾರಕೊಟ್ಟು, ಕಾವ್ಯಗಳನ್ನು ಬರೆಯಬೇಕು; ಸಂಪ್ರ ದಾಯದಲ್ಲಿ ಸಿಥಿಲವಾದರೂ ದೋಷವಲ್ಲ; ಕಾವ್ಯವು ರಸವತ್ತಾಗಿ ಆಕರ್ಷಕವಾದರೆ ತೀರಿತು ಎಂಬ ವಿಚಾರಗಳು ಉದಯವಾದವು. ಕನ್ನಡ ಸಾಹಿತ್ಯದ **ಓದುಗಬ್ಬವು** (ಚಂಪೂಕಾವ್ಯ) ಪಂಡಿತರಂಜನೆಯ ಸಾಹಿತ್ಯ ವೆಂದೂ, **ಹಾಡುಗಬ್ಬವೇ** ಜನತೆಗೆ ಯೋಗ್ಯವೆಂದೂ, ಅದೂ ಸರ್ವೋ ತ್ಕೃಷ್ಟವಾದ ಸಾಹಿತ್ಯವೆಂದೂ, ಜನಮತವಾಗತೊಡಗಿತು. ಈ ಹೋರಾಟದ ಚಿತ್ರವನ್ನು ಕೆಳಗಿನ ಪದ್ಯಗಳಲ್ಲಿ ಕಾಣಬಹುದು.

**ಕಬ್ಬಿಗರೋದುಗಬ್ಬವ. ಹಾಡುಗಬ್ಬವ ಕಬ್ಬದೊಳೊರೆವರಿವೆರಡು ।**
**ಕಬ್ಬಿನಂತಿರಬೇಕು, ಬಿದಿರಂತೆ ಇರಲು ಏ ಕಬ್ಬ ಹೇಳೆಲೆ ಸರಸ್ವತಿಯೇ ॥**

**—ರತ್ನಾಕರ ವರ್ಣಿ.**

**ಸಕಲ ಲಕ್ಷಣವು ವಸ್ತುಕಕೆ ವರ್ಣಕಕಷ್ಟು । ವಿಕಲವಾದರೂ ದೋಷವಿಲ್ಲ ॥**

ಸಕಲ ಲಕ್ಷಣಕಾಗಿ ಬಿರುಸುಮಾಡಿದರೆ ಪು । ಸ್ತಕದ ಬದನೆಕಾಯಹುದು ॥

—ರತ್ನಾಕರವರ್ಣಿ.

ರಳ ಕುಳಕ್ಷಳ ಶಿಥಿಲ ಸಮಾಸ ಮುಂತಾದವ । ರೊಳಗಿಲ್ಲಿ ಕೆಲವುಳ್ಳರುಂಟು ।
ಕೆಲವಿಲ್ಲ, ಏಕಿಲ್ಲವೆಂದರೆ ಯದರ ಕೋ । ಟಲೆಯೇಕೆ **ಹಾಡುಗಬ್ಬದೊಳು**

—ರತ್ನಾಕರ.

ಚಿಪ್ಪಿನೊಳಿಹ ಮುತ್ತು **ವಸ್ತುಕ** । **ವರ್ಣಕ** ಚಿಪ್ಪು ಕಳೆದುಸರಗೆಯ್ದ ।
ಸುಪ್ಪಾಣಿ ಮುತ್ತಿನಹಾರ ವೆಂದಿನಿಪೊಂ । ದೊಪ್ಪದೋರದೊಡವಕವಿಯೆ ?

**ಬಾಹುಬಲಿ**

ಶಬ್ದಮಣಿ ಮೊದಲಾದ ಶಾಸ್ತ್ರದ ।
ಹೊದಿಕೆಯು ಸಾಹಿತ್ಯಕಲ್ಲದೆ ।
ಹೃದ್ಯ ಷಟ್ಪದಿ **ಹಾಡುಗಬ್ಬುಗಳಿಂಗೆ** ಬೇಡೆಂದು ।
ಸಿದ್ಧ ನೂತನ ಕವಿಗಳುಸುರಿದ ।
ಪದ್ಧತಿಯೊಳೆಡಹೆಡಹಿ ಬೀಳುತ ।
ಬುದ್ಧಿಯರಿವೆಂತೊರೆವೆನಿದ ಬೆಳ್ನುಡಿಯ ಬಿರಕೆಯಲಿ ॥

—ಆದಿತ್ಯಪುರಾಣ

ಇವೆಲ್ಲ ಮಾತುಗಳು ಆ ಕಾಲದ ಒಂದು ಚಿತ್ರವನ್ನು ಚಿತ್ರಿಸುತ್ತಿವೆ. **ಓದುಗಬ್ಬವು** ಮೆಲ್ಲನೆ ಹಿಂದೆ ಬಿದ್ದು, **ಹಾಡುಗಬ್ಬವು** ತಲೆಯೆತ್ತಿದುದನ್ನು ಇವು ಸ್ಪಷ್ಟವಾಗಿ ಹೇಳುತ್ತವೆ. **ಈ ಹಾಡುಗಬ್ಬವು** ಕ್ರಾಂತಿಕಾರಕರಿಗೆ ಕೈದೀವಿಗೆಯಾಯಿತು.

ಇದು ಎಲ್ಲವೂ ಅಂತರಂಗದ ಕುದಿಯಾದರೂ ಬಹಿರಂಗವಾಗಿ, ಪ್ರತಿಭಟಿಸಿ ನಿಲ್ಲುವ ಧೈರ್ಯವು ಬೇಕಲ್ಲವೇ ? ಕ್ರಾಂತಿಯಿಂದ ಉತ್ಪನ್ನವಾದ ಸ್ವಾತಂತ್ರ್ಯದ ಕಲ್ಪನೆಯು ಸಾಹಿತ್ಯದ ದಾಸ್ಯವನ್ನೂ ಹರಿದೊಗೆಯಲು ಪ್ರೇರಿಸಿತು. ಕಥನ ಕಾವ್ಯಕ್ಕೆ, ರಗಳೆಗಳೇ ಚನ್ನಾಗಿ ಹೊಂದುತ್ತವೆಂಬುದನ್ನು ಮೊದಲು ಮನಗಂಡು ಹೊಸ ಹಾದಿಯನ್ನು ಹಿಡಿದ ವೀರನು **ಹರಿಹರನು.** ತನ್ನ ಅದ್ಭುತವಾದ ವರ್ಣನಾಶಕ್ತಿಯಿಂದ ಶಿವಲೀಲೆಗಳ ಚಿತ್ರವನ್ನು ಮನೋಹರವಾಗಿ ಚಿತ್ರಿಸಿ, ರಗಳೆಗಳಲ್ಲಿ ಎಂತಹ ಸಾಮರ್ಥ್ಯವಿರುವದೆಂಬುದನ್ನು ತೋರಿಸಿದನು. ಇವನ ರಗಳೆಗಳು ಎಲ್ಲರನ್ನೂ ತಲೆದೂಗಿಸಿದವು. ಅವನ ಕೀರ್ತಿಯು

ಇಂದಿಗೂ ಮಾಸದೆ ನಿಂತಿರುವುದು. ಅವನ ರಗಳೆಗಳಿಂದ, '**ವೀರ ಮಾಹೇಶ್ವರಾಚಾರ ಸಂಗ್ರಹ**' ವೆಂಬ ಸಂಸ್ಕೃತ ಗ್ರಂಥಕಾರನು

ಯಃಪುರಾತನ ಚಾರಿತ್ರ್ಯಂ ಕೃತವಾನ್ ದೇಶಭಾಷಯಾ ।
ಪಂಪಾಹರೀಶ್ವರಂ ನೌಮಿ ಸಂಪಾದಿತ ಶಿವಾಸ್ಪದಂ ॥

ಎಂದು ಹರಿಹರನಿಗೆ ಗೌರವದಿಂದ ತಲೆಬಾಗುತ್ತಾನೆ. ಇದರ ಅರ್ಥ ವಿಷ್ಟೇ, ರಗಳೆಗಳು ಪಂಡಿತರಿಗೂ ಮಾನ್ಯವಾದವು. ಸಾಹಿತ್ಯದಲ್ಲಿ ಸ್ಥಾನ ವನ್ನು ಪಡೆದವು. ಈ ಕನ್ನಡ ಛಂದಸ್ಸನ್ನು ಬೆಳಕಿಗೆ ತಂದು ಕನ್ನಡ ಸಾಹಿತ್ಯವಾಹಿನಿಗೆ ಒಂದು ಹೊಸದಾರಿಯನ್ನು ಮಾಡಿಕೊಟ್ಟ ಕೀರ್ತಿಯು ಹರಿಹರನಿಗೇ ಸಲ್ಲುವದು. ಇದರಿಂದ ಹಲವು ಮಾತುಗಳು ನಿಚ್ಚಳ ವಾದವು.

ಚಂಪೂ ಕಾವ್ಯಗಳನ್ನು ಬಿಟ್ಟು ರಸವತ್ತಾಗಿ ಕಾವ್ಯಗಳನ್ನು ಬರೆಯ ಬಹುದು.

**ಹಾಡುಗಬ್ಬಗಳೇ** ಜಾಗ್ರತಿಗೆ-ಮತಪ್ರಚಾರಕ್ಕೆ ಅನುಕೂಲವಾದ ವುಗಳು.

ಜನಪದಸಾಹಿತ್ಯವೆಂದರೆ, ಕನ್ನಡ ಛಂದಸ್ಸಿನಥಾಟಿ. ಇವುಗಳಲ್ಲಿ ಸಾಹಿತ್ಯವು ಬೆಳೆದರೆ ಜನರಲ್ಲಿ ಉಳಿಯುವದು. ಇಲ್ಲವಾದರೆ ಅದು ಪುಸ್ತಕದ ಬದನೇಕಾಯಿಯಾಗುವದು.

ಆದರೆ ಕೇವಲ ವಚನ ರಗಳೆಗಳೆರಡೇ ಕವಿಹೃದಯಕ್ಕೆ ಸಾಲದಾದುವು. ಕವಿಗೆ ತನ್ನ ಕುಸುರನ್ನು ತೋರಿಸಲು, ಹೃದಯ ಚಿತ್ರವನ್ನು ಚಿತ್ರಿಸಲು ಹಾಡನ್ನು ಒಳ್ಳೇ ಬೆಡಗಿನ ಬಗುವಿನಿಂದ ಕುಣಿಸಲು ಇವು ಅಪೂರ್ಣ ವೆನಿಸಿ ಇನ್ನೂ ಹೊಸರೀತಿಗಳ ಆವಶ್ಯಕತೆ ತೋರಿತು. ಈ ಆವಶ್ಯಕತೆಯೇ ನವಸೃಷ್ಟಿಯನ್ನು ನಿರ್ಮಿಸಿತು. ಅದೇ ಕನ್ನಡೀ ಕರಣವನ್ನು ಹೊಂದಿದ ಅರ್ಥಾತ್-ಕರ್ನಾಟಕತ್ವದ ದೃಷ್ಟಿಯಿಂದ ಹುಟ್ಟಿದ **ಕನ್ನಡಸಾಹಿತ್ಯ.**

ಕನ್ನಡ ಜನಜೀವನವೆಲ್ಲವೂ ಪಾಡುಗಬ್ಬದಲ್ಲಿ. ಹಾಡಿನಲ್ಲಿ. ಆ ಕಾಲದ ಸಾಹಿತಿಗಳು,ಜೀವನದ ಈ ಜೀವಾಳವನ್ನರಿತು ಜನಜೀವನದ ನಾಲಿ ಗೆಯಲ್ಲಿ ತಮ್ಮ ಸಾಹಿತ್ಯವು ನಲಿದಾಡಬೇಕೆಂದು ಬಯಸಿ, **ಕನ್ನಡ ಸಂಗೀತದ** ತಾಳ, ಲಯ, ಶ್ರುತಿಗಳಿಗೆ ಸರಿಹೊಂದಿ, ಶುಶ್ರಾವ್ಯವಾಗು

ವಂತೆ, ಸಾಹಿತ್ಯಕ್ಕೆ ರೂಪುಗೊಡಲು ಯತ್ನಿಸಿದರು. ಕನ್ನಡ ಸಂಗೀತದ ಪಡಿಯಚ್ಚಿನಲ್ಲಿ ಸಾಹಿತ್ಯದ ಎರಕವನ್ನು ಹೊಯ್ದು, ಕನ್ನಡಸಾಹಿತ್ಯ ವನ್ನು ನಿರ್ಮಿಸಿದರು. ಈ ಅದ್ಭುತವಾದ ಕನ್ನಡೀ ಕರಣವು ಸಾಹಿತ್ಯದ ಜೀವನದಲ್ಲಿ ಕರ್ನಾಟಕತ್ವದ ದೃಷ್ಟಿಯಿಂದ ಸುವರ್ಣಾಕ್ಷರಗಳಿಂದ ಬರೆ ದಿಡತಕ್ಕಂತಹದಿದೆ.

ಸಾಹಿತ್ಯವನ್ನು ಸಂಗೀತದೊಡನೆ ಬೆರಿಸಿದೊಡನೆಯೇ ತಾಳಕ್ಕೆ ತಕ್ಕಂತೆ ವಿವಿಧರೂಪಗಳನ್ನು ಧರಿಸಿ ಷಟ್ಪದಿ, ಸಾಂಗತ್ಯಗಳಾದುವು.

ಷಟ್ಪದಿಗಳ ಹಾಗು ಸಾಂಗತ್ಯದ ರೂಪಗಳನ್ನೂ ಸಂಗೀತದ ತಾಳ ಗಳನ್ನೂ ಪರಿಕ್ಷಿಸಿದರೆ, ನಮ್ಮಮಾತಿನ ಸತ್ಯತೆಯು ಕಂಡುಬರುವದು.

ನಮ್ಮಲ್ಲಿಯ ಷಟ್ಪದಿಗಳು, ಶರ, ಕುಸುಮ, ಭೋಗ ಭಾಮಿನಿ ಪರಿವರ್ಧಿನಿ, ವಾರ್ಧಿಕ, ವೆಂದು ಆರು. ಮತ್ತು ಸಾಂಗತ್ಯ.

ಕರ್ನಾಟಕ ಸಂಗೀತದಲ್ಲಿ ತಾಳಗಳಿರುವುದು ಏಳು. ಈ ತಾಳದ ಗತಿ, ಲಯಗಳನ್ನನುಸರಿಸಿದ ಮಾತ್ರಾಗಣಗಳನ್ನು ನಿರ್ಮಿಸಿ ಆ ಗಣ ಗಳಿಂದ ೬ ಷಟ್ಪದಿಗಳನ್ನೂ ಸಾಂಗತ್ಯವನ್ನೂ ಅಂದಿನ ಕ್ರಾಂತಿಕಾರರು ರಚಿಸಿಕೊಂಡರು.

## ಅದರ ವಿವರಣೆಯು.

**ಶರಷಟ್ಪದಿಯು** ೪ + ೪ ಮಾತ್ರೆಯ ಗಣಗಳಿಂದ ಕೂಡಿ ಆದುದು. **ಏಕತಾಳ**ದ ಗತಿಯು ೪ ಮಾತ್ರೆಗಳುಳ್ಳುದು.

ಮುರಿದೆ ಕಮತವನು | ಹಿರಿಯರ ಹೊಲ ರೈ |
ತಂಗೆಕೊಟ್ಟು ಕಷ್ಟವಪಡುವೆ |
ನೆರೆದುಡಿವಾಳ್ಗಳ | ತೊರೆಯುತ ದುಡಿಯುವೆ |
ಹೆರವರ ಆಳ್ಕೀನಾಗಿರುವೆ ||

**ಕುಸುಮ** ಷಟ್ಪದಿಯು ೫ + ೫ ಮಾತ್ರೆಯಗಣಗಳಿಂದ ರಚಿತ ವಾದುದು. **ಝಂಪೆತಾಳ**ವು ೫ ಮಾತ್ರೆಗಳಲ್ಲಿ ನಡೆಯುವುದು.

ಉಲಿಯೆಚಾದಗೆಗಳು | ಪ್ಮಳಿಸಿ ಹಂಸೆಗಳುಬೆಳು |
ಸುಳಿವುಟ್ಟಿಗಟ್ಟಿ ಕೇತಕಿಗಳಲ್ಲಿ |

ನಲಿದು ನರ್ತಿಸೆ ಕೇಕಿ । ಕುಳವಲರೆ ಕಡವು ಕ ।
ಣ್ಮಲೆದು ತೀಡಿತ್ತು ಪಶ್ಚಿಮಮಾರುತಂ ॥

**ಭೋಗ** ಷಟ್ಪದಿಯು ೬+೬ ಮಾತ್ರೆಗಳ ಗಣಗಳಿಂದ ರಚಿತವಾದುದು. **ರೂಪಕತಾಳವು** ೬ ಮಾತ್ರೆಯ ನಡಿಗೆಯದು. ೬ ಮಾತ್ರೆಯ ಗಣಗಳು ಉದ್ದವಾಗುವವೆಂದು ಬಗೆದು, ೬ ಮಾತ್ರೆಯ ಅಖಂಡಗಣದಲ್ಲಿ ಮತ್ತೆ ಒಡೆದು ಮೂರು ಮೂರು ಮಾತ್ರೆಗಳ ಗಣಗಳನ್ನೇ ಇಲ್ಲಿ ಮಾಡಿಕೊಂಡಿದ್ದಾರೆ.

ಊರನೆಲ್ಲ ತಿರಿದು ಒಡಲ । ಪೂರ ಉಂಬೆನೆಂದು ಬರಲು ।
ದಾರಿಯಲ್ಲಿ ತಿರಿಮುದೆಲ್ಲಚಲ್ಲಿ ಹೋಗಲು ।
ಮೀರಿಆಚೆ ಪುರವತಿರಿಯೆ । ಆರು ಇಲ್ಲವೆನಲಿ ಎನಗೆ ।
ಮಾರಹರನ ನೆನೆವುದಿಂತುಟಲ್ಲದಾಗದು ॥

**ಭಾಮಿನಿಷಟ್ಪದಿಯು** ೭+೭ ಮಾತ್ರೆಗಳ ಗಣದಿಂದ ಕೂಡಿದೆ. **ತ್ರಿವಡಿಯ** ತಾಳವು ೭ ಮಾತ್ರೆಗಳಲ್ಲಿ ನಡೆಯುವದು

ನೀಲಗಿರಿ ಹಿಮಶೈಲನೆನಿಸೆತ । ಮೂಲಕಾನನಮಮಳಮುಕ್ತಾ ।
ಜಾಲಮಂಟಪಮೆನಿಸೆ ಜಾಹ್ನವಿ ಯೆನಿಸೆ ಕಾಳಿಂದಿ ॥
ಶೂಲಿಯೆನಿಸೆ ಮುಕುಂದಮೂರ್ತಿಮ । ರಾಳಮಾಳೆಯೆನಿಸೆ ಪಿಕಾವಳಿ ।
ಕಾಳಿಕಾಪರುಮಾಣುವಿಂ ಚಂದ್ರಿಕೆ ವಿರಾಜಿಸಿತು ॥

**ಪರಿವರ್ಧಿನಿಯು** ೮+೮ ಮಾತ್ರೆಗಳಿಂದ ಕೂಡಿದೆ. **ಆದಿತಾಳವೂ** ೮ ಮಾತ್ರೆಯದು.

ಕೆಲಕೆಲಬರ್ ಕೀಲಿಸಿದಂತಿರ್ದರ್ । ಕೆಲಕೆಲಬರ್ ಸ್ತಂಭಿಸಿದಂತಿರ್ದರ್ ।
ಕೆಲಕೆಲಬರ್ ಮೂರ್ಛಿಸಿದಂತಿರ್ದರ್ ವಸುಧಾಪಾಲಕರು ॥
ಕೆಲಕೆಲಬರ್ ಪಾವಡರ್ದಂತಿರ್ದರ್ । ಕೆಲಕೆಲಬರ್ ಮೆಯ್ಮರೆದಂತಿರ್ದರ್ ।
ಗೆಲೆಚಿತ್ರದಸಭೆಯಂ ಸಭೆ ಜಾನಕಿ ಪುಗಲು ರತಿಯ ಮಿಗಲು ॥

**ವಾರ್ಧಿಕ ಷಟ್ಪದಿಯು** ೧೦+೧೦ ಮಾತ್ರೆಗಳ ಗಣಗಳಿಂದ ರಚನೆಗೊಂಡಿರುವದು. **ಮಟ್ಯತಾಳವು** ೧೦ ಮಾತ್ರೆಗಳನ್ನು ಒಳಗೊಂಡಿರುವದು.

ಸುಳಿವ ತೆಂಗಾಳಿಯಿಂ ಪರಿಪಕ್ವಫಲರಸದೆ ।
ಬಳಸಿದ ಸುಗಂಧದಿಂ ಲಲಿತತರುಲತೆಗಳಿಂ ।

ಕಳಕಂಠ ಕೂಜಿತದೆ ಮೆಯ್ಗೆ ರಸನೆಗೆ ನಾಸಿಕಕ್ಕೆ ಕಣ್ಗಳಿಗೆ ಕಿವಿಗೆ ||
ನಲವನಿಂಪಂ ಸೊಗಸನಾಶ್ಚರ್ಯಮಂ ಕುತೂ |
ಹಳತೆಯಂ ಮಾಳ್ಪುದೊದವಿಪುದು ವಿತರಿಪುದುಸಂ |
ಗಳಿಪುದೀವುದು ಜಗಂ ಪೊಗಳೆ ಕೊಂಡಾಡೆ ತಳೆದೂಗೆ ಬಣ್ಣಿಸೆ
ಬಯಸೆ ವನಮೆಸೆಸುದು ||

**ಸಾಂಗತ್ಯವು ಅಷ್ಟತಾಳಗಳಲ್ಲಿ** ನಡೆಯುವದು. ಇದರ ಗಣಗಳು ನಿಯತ ಮಾತ್ರಾಗಣಗಳಲ್ಲ ಇಲ್ಲವಾದರೂ **ಸಾಂಗತ್ಯವನ್ನು** ತಾಳ ದೊಂದಿಗೆ ಹೇಳಬೇಕಾದಾಗ, ಗುರು ಲಘುಗಳನ್ನು ಎಳೆದಾಡಿಕೊಂಡು **ಅಷ್ಟತಾಳ**ದಲ್ಲಿಯೇ ಹೇಳುತ್ತಿರುವದನ್ನು ನಾವು ನೋಡುವೆವು.

ತರ್ಕ ಶಾಸ್ತ್ರವನೋದಿ ತಗರು ತಗರಿನಂತೆ | ಮಾರ್ಕೊಂಡು ಹೊಡೆದಾಡ
ಬಹುದು. ||
ಅರ್ಕನಂತೆ ಸ್ವಾತ್ಮಯೋಗವಿಂತಿಹುದೆಂದು | ಬೇರ್ಕೆಯ್ದು ವಚನಿಸಲರಿದು ||

ಸಂಗೀತವು ಸಾಹಿತ್ಯಕ್ಕೆ ಹೇಗೆ ರೂಪಗೊಟ್ಟಿತೆಂಬುದನ್ನು ಈ ನಮ್ಮ ನಿರೀಕ್ಷಣವು ಸ್ಪಷ್ಟಗೊಳಿಸುವದು.

ಹೀಗೆ ಸಾಹಿತ್ಯವು ಕನ್ನಡ ಸಂಗೀತದೊಡನೆ ಬೆರೆತು, ಕನ್ನಡ ಸಾಹಿತ್ಯವಾಗಿ ಹೊಸ ಬೆಡಗಿನಿಂದ ಹರಿಯತೊಡಗಿತು. ಈ ಯುಗದಲ್ಲಿ ಸಾಹಿತ್ಯಕ್ಕೆ **ಕನ್ನಡತನ**ವುಂಟಾಯಿತು. **ಕನ್ನಡವು** ಕನ್ನಡವಾಯಿತು. ಕನ್ನಡದ ಮೆರುಗಿನಿಂದ ಕನ್ನಡದ ಧಾಟಿಯಿಂದ ಕನ್ನಡದ ಒನಪಿನಿಂದ ಕನ್ನಡ ಸಾಹಿತ್ಯವು ತನ್ನ ನಾಡಿನಲ್ಲಿ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿತು. ಇಂತಿದೆ ರಗಳೆಗಳ ಪುರಾಣ. ಈ ಕನ್ನಡದ ಬೆಳಕಿನಲ್ಲಿಯೇ ಮುಂದಿನ ಸಾಹಿತ್ಯವು ಸಾಗಿದೆ. ರಗಳೆಗಳನ್ನು ನೋಡೋಣ.

**ಹರಿಹರನೇ ರಗಳೇಕಾವ್ಯಗಳ** ಮೊದಲಿಗನಾದರೂ ಅಲ್ಲಲ್ಲಿ ಚಂಪೂಕಾವ್ಯಗಳಲ್ಲಿಯೇ ರಗಳೆಗಳು ಕಾಣುತ್ತವೆ. ಪಂಪನು ವರ್ಣನಾ ಪ್ರಸಂಗದಲ್ಲಿ ಈ ಬಗೆಯ ರಗಳೆಗಳನ್ನು ಬಹು ರಂಜಕವಾಗಿ ಉಪ ಯೋಗಿಸಿದ್ದಾನೆ. ವಾಚಕರ ಚಿತ್ತವು ಜೀಕುವಂತೆ, ರಚಿಸಿದ ಮನೋ ಹರವಾದ ಪಂಪನ ರಗಳೆಯೊಂದುಂಟು.

"ಅದರ ಪೊರವೊ ವಿಲವಿಶಾಲ, ಕನಕಕೃತಕ ಗಿರಿಗಳಿಂ |

ಫಲ ಪ್ರಕೀರ್ಣ ತರುಗಳಿಂ" ಇದು ಆ ರಗಳೆಯ ಮೊದಲನೆಯ ಸಾಲು.

ನಾಗವರ್ಮನೂ ತನ್ನ ಕಾದಂಬರಿಯಲ್ಲಿಯೂ ರಗಳೆಗಳನ್ನು ಉಪಯೋಗಿಸಿದ್ದಾನೆ.

**ಹರಿಹರನು** ಚಂಪೂಕಾವ್ಯಗಳಲ್ಲಿ ಕಾಣುವ ಈ ರಗಳೆಗಳಿಗೆ ಜೀವ ಕೊಟ್ಟು ಕುಣಿಸಿದನು. ಅವನ ಚಿತ್ತವೃತ್ತಿಯು ವರ್ಣನಾಚಿತ್ರಗಳು ಈ ರಗಳೆಗಳು ಶಿವಶರಣರ ಚರಿತ್ರೆಗಳಲ್ಲಿ **ಭಕ್ತಿರಸವು** ಪ್ರವಾಹರೂಪವಾಗಿ ಹರಿದಂತೆ, ಭಾಸವಾಗುತ್ತದೆ. ಆ ರಸಕ್ಕೆ ರುಚಿಗೆಟ್ಟನಂತೆ, ಅರ್ಥಾಲಂಕಾರ, ಶಬ್ದಾಲಂಕಾರಗಳನ್ನು ಬೆರೆಸಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಹರಿಹರನ ರಗಳೆಗಳು ಒಂದು ವೈಶಿಷ್ಟ್ಯವನ್ನು ಪಡೆದಿವೆ.

ಇವನು **ರಗಳೆ ಕವಿಯೆಂದೇ** ಪ್ರಸಿದ್ಧವಾಗಿದ್ದಾನೆ. ಶಿವಶರಣರ ಚರಿತ್ರೆಗಳನ್ನೆಲ್ಲ ರಗಳೆಯ ಛಂದಸ್ಸಿನಲ್ಲಿಯೇ ಬರೆದಿದ್ದಾನೆ. ಅವು ನೂರೊಂದು ರಗಳೆಗಳೆಂದೂ, ನೂರಿಪ್ಪತ್ತು ರಗಳೆಗಳೆಂದೂ ಹೇಳುತ್ತಾರೆ. ಈ ರಗಳೆಗಳಲ್ಲಿ ಎರಡು ಭಾಗಗಳನ್ನು ಮಾಡಬಹುದು. ಕ್ಷೇತ್ರ, ವಿಭೂತಿ, ರುದ್ರಾಕ್ಷಿಗಳ ಮಹಾತ್ಮೆಗಳು, ಮತ್ತು ಪುರಾತನ ಹಾಗು ಆಧುನಿಕ ಶಿವಭಕ್ತರ ವರ್ಣನೆಗಳು. ಬಸವರಾಜ ದೇವರಗಳೆ, ಅಕ್ಕಮಹಾದೇವಿಯ ರಗಳೆ, ಪ್ರಭುದೇವರ ರಗಳೆಗಳು ಪ್ರಸಿದ್ಧವಾಗಿವೆ.

ಹರಿಹರನು ತನ್ನ ವಸ್ತುಗಳನ್ನು ಎಲ್ಲಿಂದ ತೆಗೆದುಕೊಂಡನು ಎಂಬುದನ್ನು ಬೇರೆ ಬೇರೆಯವರು ಬೇರೆ ಬೇರೆಯಾಗಿ ಹೇಳುತ್ತಾರೆ. ಸ್ಕಂದಪುರಾಣಗಳಲ್ಲಿಯೂ ಶಿವರಹಸ್ಯವೆಂಬ ಪುರಾಣದಲ್ಲಿಯೂ ಈ ಕಥೆಗಳಿರುವವಂತೆ. ಅವನ್ನೇ ತೆಗೆದುಕೊಂಡನೆಂದು ಕೆಲವರೂ, ತಮಿಳಿನ **ಪೆರಿಯ ಪುರಾಣದಿಂದ** ಎಂದು ಕವಿಚರಿತೆಕಾರರೂ ಹೇಳುತ್ತಾರೆ.

ಈ ರಗಳೆಗಳಲ್ಲಿ ಭಕ್ತಿಯ ಅನೇಕ ಮಾರ್ಗಗಳು ಹೇಳಿವೆ. ಸತಿಪತಿಭಾವ, ಸ್ವಾಮಿಭೃತ್ಯಭಾವ, ಸಖ್ಯಾಭಾವ, ಪಶುಪತಿಭಾವ, ವಾತ್ಸಲ್ಯಭಾವ ಇವು ಮುಖ್ಯವಾದುವು. ಅಲ್ಲದೆ ಶಿವಮೂರ್ತಿಯ ದರ್ಶನ, ಸ್ಪರ್ಶನ, ಕ್ಷೇತ್ರಸೇವೆ, ಜಾಗರಣೆ, ದೇವಾಲಯನಿರ್ಮಾಣ, ಶ್ರವಣ, ಕೀರ್ತನ, ಜಪ, ಅಭಿಷೇಕ, ಮುಂತಾದ ಪೂಜಾಕಾರ್ಯಗಳೂ ಭಗವಂತನ ಕರುಣೆ

ಯನ್ನು ಪಡೆಯಲು ಸಾಧನಗಳು. ಇವುಗಳಲ್ಲಿ ಯಾವುದಾದರೂ ಒಂದನ್ನು ಎಷ್ಟೋ ತೊಂದರೆಗಳು ಬರಲಿ, ನಡುವೆ ಬಿಡದೆ ನಿಷ್ಠೆಯಿಂದ ಆಚರಿಸಿದರೆ ಶಿವ ಮೆಚ್ಚಿ ಕೈಲಾಸಕ್ಕೆ ಕರೆದುಕೊಂಡಹೋದ ಶರಣರ ಮಹಿಮೆಯ ಕಥೆಗಳಿವೆ.

ಹರಿಹರನ ಪ್ರಸಿದ್ಧವಾದ **ನೂರೊಂದು ರಗಳೆಗಳೂ,** ಕೆರೆಯ ಪದ್ಮರಸನ **ದೀಕ್ಷಾಬೋಧೆ**ಯೂ (೧೧೬೫) ಪಾಲ್ಕುರಿಕೆಯ ಸೋಮನಾಥನ **ಶರಣಬಸವ ರಗಳೆ**ಯೂ (೧೩೯೫) ಪ್ರಸಿದ್ಧವಾಗಿವೆ. ತ್ರಿಭುವನ ತಾತನು (೧೭೯೦) **ಅಮ್ಮವ್ವೆಯ**ರಗಳೆ, **ಪಗಲ್ತೋಳನರಗಳೆ** ಮತ್ತು **ಚೋಳಿಯಕ್ಕ**ನ ರಗಳೆಗಳನ್ನು ಬರೆದಿದ್ದಾನೆಂದು ತಿಳಿಯುತ್ತದೆ. ಸದಾಶಿವಲಿಂಗನು (೧೩೫೦) ರಗಳೆಗಳನ್ನೂ ಬರೆದಿರುವಂತೆ ತೋರುತ್ತದೆ. ಸ್ವತಂತ್ರಸಿದ್ಧಲಿಂಗೇಶ್ವರನ (೧೪೮೦) **ಜಂಗಮರಗಳೆ,** ಶಂಕರದೇವನ (೧೬೨೦) **ಷಡಕ್ಷರ** ರಗಳೆ ಮತ್ತು **ಭಕ್ತಿಬಿನ್ನಹದ** ರಗಳೆಗಳು ಸುಪ್ರಸಿದ್ಧವಿವೆ.

ರಗಳೆ ಎಂಬುದು ಒಂದು ಬಗೆಯ ಪದ್ಯಜಾತಿ. ಇದರಲ್ಲಿ **ಮಂದಾನಿಲ, ಲಲಿತ, ಉತ್ಸಾಹಗಳೆಂಬ** ಮೂರು ಭೇದಗಳಿವೆ. ೪ ಮಾತ್ರೆಯ ೪ ಗಣಗಳಿಂದ **ಮಂದಾನಿಲ**ವಾಗುತ್ತದೆ. ೫ ಮಾತ್ರೆಯ ೫ ಗಣಗಳಿಂದ **ಲಲಿತ,** ಮೂರು ಮಾತ್ರೆಯ ೮ ಗಣಗಳಿಂದ **ಉತ್ಸಾಹ**ಗಳಾಗುತ್ತವೆ. ನಾಗವರ್ಮನು ಹೇಳುವ **ರಘಟಾ**ಲಕ್ಷಣವು ರಗಳೆಗೆ ಅನ್ವಯಿಸುತ್ತದೆ.

## ಷಟ್ಪದಿಗಳು

ಹರಿಹರನು ಬಂಡೆನ್ನೆಬ್ಬಿಸಿ, ಕ್ರಾಂತಿಯನ್ನುಂಟುಮಾಡಿದನು. 'ಶಿಷ್ಯಾದಿಚ್ಛೇತ್ ಪರಾಜಯಂ, ಎಂಬಂತೆ, ಅವನ ಶಿಷ್ಯನಾದ **ರಾಘವಾಂಕನು ಷಟ್ಪದಿಗಳಿಗೆ** ಕನ್ನಡ ಸಾಹಿತ್ಯ ಸಾಮ್ರಾಜ್ಯದ ಪಟ್ಟಗಟ್ಟಿದನು. ಷಟ್ಪದಿಗಳು ೧೩ನೇ ಶತಮಾನದಿಂದ ೧೬ನೇ ಶತಮಾನದ ಅಂತ್ಯದ ವರೆಗೆ ಅಖಂಡವಾಗಿ ರಾಜ್ಯಭಾರ ಮಾಡಿದ್ದುದು ಕಂಡು ಬರುತ್ತದೆ.

ಕನ್ನಡ ಸಾಹಿತ್ಯಕ್ಕೆ ಇದು **ವಸಂತಕಾಲ**ವೆನ್ನಬಹುದು. ಕಸಿ ಮಾಡಿ ಗೊಬ್ಬರವನ್ನು ಹಾಕಿದೊಡನೆಯೇ, ಬಳ್ಳಿಯು ಭರದಿಂದ ಬೆಳೆದು

ಹುಲುಸಾಗಿ ಹೂ, ಕಾಯಿಗಳನ್ನು ಬಿಡುವಂತೆ, ಬಸವ. ಹರಿಹರರಿಂದ ಕಸಿ ಮಾಡಲ್ಪಟ್ಟ ಕನ್ನಡ ಸಾಹಿತ್ಯವು, ಸುಂದರವಾದ, ಪರಿಪಕ್ವವಾದ, **ಹರಿಶ್ಚಂದ್ರಕಾವ್ಯ, ಪ್ರಭುಲಿಂಗಲೀಲೆ, ಕುಮಾರವ್ಯಾಸನ ಭಾರತ, ಜೈಮಿನಿಭಾರತ**ಗಳಂತಹ ಒಳ್ಳೇ ಫಲವನ್ನು ಕೊಟ್ಟಿತು. ನೂರಾರು ಕವಿಗಳು ನಾ ಮೇಲು ನೀ ಮೇಲು ಎಂದು ಕಾವ್ಯಗಳನ್ನು ಬರೆದುದು ಕಂಡುಬರುತ್ತದೆ. ಈ ಕಾಲದಲ್ಲಿ ಕನ್ನಡ ಸಾಹಿತ್ಯವು ಮನೆಮನೆಯಲ್ಲಿ, ಜನಜೀವನ ನಾಲಿಗೆಯ ಮೇಲೆ, ನಲೆದಾಡುವ, ಸುಂದರವಾದ ದೃಶ್ಯವು ಕಣ್ಣಿಗೆ ಬೀಳುತ್ತದೆ.

**ರಾಘವಾಂಕನೇ** ಷಟ್ಪದಿಗಳ ಜನಕನೆಂದು, **ಸಿದ್ಧನಂಜೇಶನು** ರಾಘವಾಂಕ ಚರಿತೆಯಲ್ಲಿ ಹೇಳುತ್ತಾನೆ. ರಾಘವಾಂಕನು ಹರಿಹರನ ಲಲಿತ **ರಗಳೆಯ** ಪಾದಗಳನ್ನೇ **೧-೨, ೪-೫** ಪಾದಗಳನ್ನು ಮಾಡಿಕೊಂಡು, **ವಾರ್ಧಿಕ-ಷಟ್ಪದಿಯನ್ನು** ನಿರ್ಮಿಸಿ, ಷಟ್ಪದಿಕಾರರಿಗೆ, **ಮಾರ್ಗದರ್ಶಿ**ಯಾದನು. ಮುಂದೆ ಅವು ಕವಿಗಳ ಹೃದಯದ ವೈವಿಧ್ಯದಂತೆ, ವಿವಿಧ ರೂಪಗಳನ್ನು ತಾಳಿದವು.

ರಾಘವಾಂಕನು ಷಟ್ಪದಿಗಳ ಜನಕನಾದರೂ, ಷಟ್ಪದಿಗಳ ಸುಳಿವು ಮೊದಲಿನ ಸಾಹಿತ್ಯದಲ್ಲಿ ಇಲ್ಲದೆ ಇಲ್ಲ. **ನಾಗವರ್ಮನು** ತನ್ನ ಛಂದೋಗ್ರಂಥದಲ್ಲಿ, **ಶರಷಟ್ಪದಿ**ಯೊಂದನ್ನು ಹೇಳುತ್ತಾನೆ. ಚಂದ್ರರಾಜನು (೧೦೭೯) ತನ್ನ **ಮದನಮಂಜರಿ**ಯಲ್ಲಿ **೮೪** ವೃತ್ತಗಳನ್ನು ತೋರಿಸುವಾಗ ಎರಡು ಷಟ್ಪದಿಗಳೂ ಆಗುತ್ತವೆಂದು ಹೇಳಿದ್ದಾನೆ. ರನ್ನನ ಗದಾಯುದ್ಧದಲ್ಲಿಯೂ ಒಂದು ಪರಿವರ್ಧನಿಮಧ್ಯ ಷಟ್ಪದಿಯು ಕಂಡು ಬರುತ್ತದೆ. ಆದರೆ, ಇಲ್ಲಿ ಅವು ಇನ್ನೂ ಕಲ್ಪನಾಸೃಷ್ಟಿಯಲ್ಲಿದ್ದುವು. ರನ್ನನು ರಚಿಸುವಾಗ ಸಹಜವಾಗಿ ಬಂದುದು ಎಂದು ಹೇಳಬಹುದೇ ವಿನಃ **ಮಹಾಕಾವ್ಯ**ಗಳನ್ನು ರಚಿಸಲು ತಕ್ಕಸಾಧನಗಳೆಂದಿರಲಿಲ್ಲ.

ಷಟ್ಪದಿಗೆ ಪ್ರಾಶಸ್ತ್ಯ ದೊರೆತುದುದು **ರಾಘವಾಂಕನಿಂದ.** ಚಂಪು ಶೈಲಿಯನ್ನುಳಿದರೆ, ಬೇರೆಯವರ ವೃತ್ತವೂ, **ಮಹಾಕಾವ್ಯಗಳ** ರಚನೆಗೆ ಸರಿಹೋಗದೆಂಬ ನಂಬುಗೆಯು ದುರ್ಬಲವಾದುದು ಎಂಬುದನ್ನು **ಹರಿಶ್ಚಂದ್ರ** ಕಾವ್ಯವನ್ನು ರಚಿಸಿ ಲೋಕಕ್ಕೆ ತಿಳಿಸಿಕೊಟ್ಟನು. ರಾಘವಾಂಕನು

ಷಟ್ಪದಿಗಳು ಕವಿಯ ವಿಹಾರಕ್ಕೆ ತಕ್ಕಸಾಧನಗಳೆಂದು ಸಿದ್ಧಪಡಿಸಿದನು. ಮಹಾಕಾವ್ಯಗಳನ್ನು ರಚಿಸಲು ಸರ್ವೋತ್ಕೃಷ್ಟ ಸಾಧನಗಳೆಂದು ಮನ ಗಾಣಿಸಿಕೊಟ್ಟನು. ರಾಘವಾಂಕನ ಈ ಕಾವ್ಯವು, ಗುಣುಗುಟ್ಟುವ ವರ ಬಾಯಿಗೆ ಬೀಗಹಾಕಿ ಬಿಟ್ಟಿತು. **ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ, ವಿರುಪಾಕ್ಷಪಂಡಿತ** ಈ ಯುಗದ **ಸೀಮಾ ಪುರುಷರು.**

ಷಟ್ಪದಿ ಕಾವ್ಯಗಳಲ್ಲಿ ಎರಡು ಭಾಗಗಳನ್ನು ಮಾಡಬಹುದು. **ಪುರಾಣಗಳು** ಮತ್ತು **ಕಾವ್ಯಗಳೆಂದು.** ಮತಪ್ರಚಾರವೇ ಬಹುಕವಿಗಳ ಉದ್ದೇಶವಿದ್ದುದರಿಂದ ಈ ಕಾಲದಲ್ಲಿ ಪುರಾಣಗಳೂ, ಮತಾಚಾರದ ಗ್ರಂಥ ಗಳೂ ಹುಟ್ಟುವದು ಸ್ವಾಭಾವಿಕ. ವೀರಶೈವರು ಹೆಚ್ಚಾಗಿ ಪುರಾಣ ಗಳನ್ನು ರಚಿಸಿದುದು ಕಂಡುಬರುತ್ತದೆ. ರಾಘವಾಂಕನ **ಸಿದ್ಧರಾಮ ಪುರಾಣ,** ಭೀಮಕವಿಯ **ಬಸವ** ಪುರಾಣ, ಮಲ್ಲಣ್ಣನ **ರೇವಣಸಿದ್ಧೇಶ್ವರ** ಕಾವ್ಯ, ಲಕ್ಕಣ ದಂಡೇಶನ **ಶಿವತತ್ವ ಚಿಂತಾಮಣಿ,** ನೀಲಕಂಠಾಚಾ ರ್ಯರ **ಆರಾಧ್ಯಚರಿತ್ರ,** ಗುಬ್ಬಿಮಲ್ಲಣಾರ್ಯರ **ಭಾವಚಿಂತಾರತ್ನ,** ಚೆನ್ನಬಸವಾಂಕನ **ಮಹಾದೇವಿಯಕ್ಕನ** ಪುರಾಣ, ವಿರುಪಾಕ್ಷಪಂಡಿ ತನ **ಚನ್ನಬಸವ ಪುರಾಣ,** ಹರೀಶ್ವರನ **ಪ್ರಭುದೇವರ** ಪುರಾಣ, ಬಸವ ಲಿಂಗನ **ಶಿವಾಧಿಕ್ಯ** ಪುರಾಣ, ಗೋವಿಂದನ **ನಂದೀಮಹಾತ್ಮೆ,** ಕುಮಾರ ಪದ್ಮರಸನ **ಸಾನಂದಚರಿತ್ರೆ,** ಪದ್ಮಣಾಂಕನ **ಪದ್ಮರಾಜ ಪುರಾಣ,** ಗುರುಬಸವನ **ಶಿವಯೋಗಾಂಗ ಭೂಷಣ,** ಚೇರಮಾಂಕನ **ಚೇರಮಕಾವ್ಯ,** ಪೆಮ್ಮಶೆಟ್ಟಿಯ **ಗುರಭಕ್ತಿ ಭಂಡಾರಚರಿತ್ರೆ,** ಮಂಗರಸನ **ಸಮ್ಯಕ್ತ್ವಕೌಮುದಿ,** ತಿರುಮಲಭಟ್ಟನ **ಶಿವಗೀತೆಗಳು** ಪ್ರಸಿದ್ಧವಾಗಿವೆ.

ಇವೆಲ್ಲವೂ ಶಿವಭಕ್ತರ ಕಥೆಗಳನ್ನೂ ವೀರಶೈವ ಧರ್ಮದ ಮಹಾತ್ಮೆ ಗಳನ್ನೂ ವರ್ಣಿಸುವ ಷಟ್ಪದಿ ಕಾವ್ಯಗಳು. ಈ ಪುರಾಣಗಳಿಗೆ ವಸ್ತು ಗಳು, ಆ ಕಾಲದ ಜ್ಞಾನಿಗಳಾದ ಶಿವಭಕ್ತರು. ಸಿದ್ಧರಾಮ ಪುರಾಣಕ್ಕೆ **ಸೊನ್ನಲಾಪುರ** (ಸೊಲ್ಲಾಪುರ) ದ ಮಹಾಜ್ಞಾನಿಯಾದ **ಸಿದ್ಧರಾಮನೇ** ನಾಯಕನು. ಕವಿಯ ಭಕ್ತಿ, ವೈರಾಗ್ಯ, ರಸಗಳನ್ನು ಈ ಕಾವ್ಯದಲ್ಲಿ

ನೋಡಬೇಕು. ರಾಘವಾಂಕನೇ ಈ ಕಾವ್ಯದ ವಿಷಯಕ್ಕೆ "ನೆರೆದ ಸೊಗಸಿನಸುಗ್ಗಿ, ರಸದವುಡು, ಪುಣ್ಯದಾಗರಂ" ಎಂದು ಬಣ್ಣಿಸಿದ್ದಾನೆ. ಅದರಂತೆಯೇ **ಬಸವ ಪುರಾಣಕ್ಕೆ** ಶ್ರೀಬಸವೇಶ್ವರನೇ ಕಥಾನಾಯಕನು. ಅವನು ಮಾಡಿದ ಪವಾಡಗಳು ಅದ್ಭುತವಾಗಿ ವರ್ಣಿಸಲ್ಪಟ್ಟಿವೆ. ಅವನ ಚರಿತ್ರೆಯೂ ಹೇಳಲ್ಪಟ್ಟಿದೆ. ಅಲ್ಲಲ್ಲಿ ಶಿವಭಕ್ತರ ಕಥೆಗಳೂ ಹೇಳಿವೆ. ಭೀಮಕವಿಯ **ಬಂಧವೂ ಲಾಲಿತ್ಯವೂ** ಅವರ್ಣನೀಯವಾಗಿವೆ. ಪದ್ಮರಾಜಪುರಾಣವು **ಕೆರೆಯ ಪದ್ಮರಸನ ಚರಿತ್ರವು. ಶಿವಾಧಿಕ್ಯಪುರಾಣದಲ್ಲಿ ಶಿವಸರ್ವೋತ್ತಮತ್ವವು** ಬಹುರಂಜಕವಾಗಿ ವರ್ಣಿಸಲ್ಪಟ್ಟಿದೆ. ಜೈನಪುರಾಣಗಳೂ, ಶಿವಗೀತೆಯಂಥ ತಾತ್ವಿಕ ಗ್ರಂಥಗಳೂ ಪ್ರೌಢವಾಗಿವೆ. ರಂಗನಾಥನ **ಅನುಭವಾಮೃತವೆಂಬ** ತತ್ವಗ್ರಂಥವು ಪ್ರಸಿದ್ಧವೇ ಇದೆ. 'ಅಖಿಳ ವೇದಾಂತದರ್ಥವನು ಸಂಗ್ರಹಿಸಿ ಪೇಳುವೆ ಸಕಲರಿಗೆ ತಿಳಿಯುವಂತೆ, ಎಂದು ಕವಿಯು ಹೇಳಿಕೊಳ್ಳುತ್ತಾನೆ. ಮನೋಹರವಾದ ಷಟ್ಪದಿಯಲ್ಲಿ ಹೇಳಲ್ಪಟ್ಟಿದೆ.

ಕವಿಗಳ ಕಾವ್ಯ ಚಮತ್ಕೃತಿಯನ್ನು ಈ ಕಾಲದ **ಮಹಾಕಾವ್ಯಗಳಲ್ಲಿ** ನೋಡಬಹುದು. ರಾಘವಾಂಕನ ಪ್ರತಿಭೆಯನ್ನು **ಹರಿಶ್ಚಂದ್ರಕಾವ್ಯದಲ್ಲಿ** ನೋಡಬೇಕು. ಅವನ ಗಾಂಭೀರ್ಯ, ವಿಶ್ವಾಮಿತ್ರಾದಿಗಳ ಪಾತ್ರಗಳನ್ನು ರಚಿಸಿರುವ ರೀತಿ, ಸಂಭಾಷಣೆಯಶೈಲಿ, ನಾಡಿನ ಅಭಿಮಾನ, ವರ್ಣನಾತೀತವಾಗಿವೆ. ಓದುಗರನ್ನು ಬೆರಗುಮಾಡುತ್ತವೆ. "**ಉಭಯಕವಿ ಕಮಲರವಿ**" ಎಂದು ಹೇಳಿಕೊಳ್ಳುವ ಇವನ ಹೆಮ್ಮೆಯು ಯಥಾರ್ಥವೆನಿಸುತ್ತದೆ. ಇವನು ಆರಿಸಿದ ಕಥಾವಸ್ತುವು ಪುರಾಣ ಹಾಗು ಐತರೇಯ ಬ್ರಾಹ್ಮಣದಲ್ಲಿ ವರ್ಣಿತವಾಗಿರುವ ಹರಿಶ್ಚಂದ್ರನಕಥೆ. ಇವನ ಎಲ್ಲ ರೀತಿಯಲ್ಲಿಯೂ **ನಾವಿನ್ಯತೆಯು** ತುಂಬಿತುಳುಕುತ್ತದೆ. ಕುಮಾರ ವ್ಯಾಸನಾದ ನಾರಣಪ್ಪನು ಕಳಸವನ್ನೇ ಇಟ್ಟಿರ್ರುವನು. ಕಥಾಸಂವಿಧಾನ, ಶೈಲಿ, ಪಾತ್ರರಚನೆ, ಅಲಂಕಾರಗಳಲ್ಲಿ ಕನ್ನಡ ಕವಿಗಳಲ್ಲಿ ಈತನು ಅಗ್ರಗಣ್ಯನು. ನೂತನ ಭಾವನೆಗಳ ತವರ್ಮನೆ ನಾರಣಪ್ಪನು. ಪ್ರತಿಭೆ, ಭಾಷೆ, ಕಲ್ಪನಾಶಕ್ತಿ, ಯಾವದೃಷ್ಟಿಯಿಂದ ನೋಡಿದರೂ ಕುಮಾರ ವ್ಯಾಸನು ಬಹು ದೊಡ್ಡಕವಿ. ಗದುಗಿನ ಭಾರತವನ್ನು

ಹಾಡುವಾಗ ನಿಜವಾಗಿಯೂ "ಕಲಿಯುಗ ದ್ವಾಪರವಾಗುವದು; ಭಾರತ ಕಣ್ಣಲಿ ಕುಣಿಯುವುದು." ಕನ್ನಡದಲ್ಲಿ ಗದಗಿನ ಭಾರತವನ್ನು ಓದದ ಹಳ್ಳಿಯಿಲ್ಲ. ಓದಿ ತಲೆದೂಗದ ಕನ್ನಡಿಗನಿಲ್ಲ. **ಕರ್ನಾಟಕ ವಿಚೂತ ವನಚೈತ್ರನೆಂದು** ಹೆಸರಾಗಿರುವ ಲಕ್ಷ್ಮೀಶನ ಜೈಮಿನಿಭಾರತವು ಲಲಿತವಾಗಿಯೂ ಮನೋಹರವಾಗಿಯೂ ಶಬ್ದ, ಅಲಂಕಾರಗಳ ಚಮತ್ಕೃತಿಯಿಂದೊಡಗೂಡಿಯೂ ಇದೆ. ಲಕ್ಷ್ಮೀಶನು ಚಮತ್ಕಾರವಾಗಿ ಶ್ಲೇಷವನ್ನು ತರುವುದರಲ್ಲಿಯೂ ಕಿವಿಗೆ ಇಂಪಾಗುವಂತೆ ಪದಗಳನ್ನು ಜೋಡಿಸುವದರಲ್ಲಿಯೂ ನಿಪುಣನು. 'ಲಕ್ಷ್ಮೀಶನಿಂಚರದಿಂಪು' ಜಗಪ್ರಸಿದ್ಧವಾಗಿದೆ. ತಮ್ಮ ಕಾವ್ಯಗುಣದ ಮೂಲಕ ಕುಮಾರವ್ಯಾಸ ಲಕ್ಷ್ಮೀಶರು ಜಾತಿ-ಮತ-ಪಂಥಗಳ ಮರ್ಯಾದೆಯನ್ನು ಮೀರಿಯೂ ಅಖಿಲ ಕನ್ನಡಿಗರ ಹೃದಯದಲ್ಲಿ ಸ್ಥಾನವನ್ನು ಪಡೆದಿದ್ದಾರೆ. ಇವುಗಳ ರಸವನ್ನು ಓದಿ ಸವಿಯಬೇಕಲ್ಲದೆ ಹೇಳಲು ಸಾಧ್ಯವಿಲ್ಲ.

ರಾಘವಾಂಕನ (೧೧೬೫) **ಹರಿಶ್ಚಂದ್ರಕಾವ್ಯ,** ಕುಮುದೇಂದುವಿನ (೧೨೭೫) **ಕುಮುದೇಂದು ರಾಮಾಯಣ,** ಭಾಸ್ಕರನ (೧೪೨೪) **ಜೀವಂಧರ ಚರಿತ್ರೆ,** ಕುಮಾರವ್ಯಾಸನ (೧೪೩೦) **ಭಾರತ,** ಕಲ್ಯಾಣಕೀರ್ತಿಯ (೧೪೩೯) **ಜ್ಞಾನಚಂದ್ರಾಭ್ಯುದಯ,** ತೆರಕಣಾಂಬಿಬೊಮ್ಮರಸನ(೧೪೮೫) **ಸನತ್ಕುಮಾರಚರಿತ್ರೆ,** ಚಾಮರಸನ (೧೪೩೦) **ಪ್ರಭುಲಿಂಗಲೀಲೆ,** ಕುಮಾರ ವಾಲ್ಮೀಕಿಯ (೧೫೦೦) **ತೊರವೆರಾಮಾಯಣ,** ತಿಮ್ಮಣ ಕವಿಯ (೧೫೧೦) **ಭಾರತ,** ಕೋಟೇಶ್ವರನ (೧೫೦೦) **ಜೀವಂಧರ ಷಟ್ಪದಿ,** ೩ನೇ ಮಂಗರಸನ (೧೫೦೮) **ಜಯನೃಪಕಾವ್ಯ,** ಚಾಟುವಿಠ್ಠಲನ (೧೫೩೦) **ಭಾಗವತ ಮತ್ತು ಭಾರತ,** ಲಕ್ಷ್ಮೀಶನ (ಸಗ ೭೦೦) **ಜೈಮಿನಿ ಭಾರತ** ಗಳು ಷಟ್ಪದಿಗಳಲ್ಲಿ ಪ್ರಸಿದ್ಧವಾಗಿವೆ.

ಷಟ್ಪದಿಯು ಶುದ್ಧ ಕರ್ನಾಟಕಛಂದಸ್ಸು. ಇವುಗಳಲ್ಲಿ **ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕ**- ಎಂದು ೬ ಬಗೆಗಳುಂಟು. ಈ ಮಹಾಕಾವ್ಯಗಳಲ್ಲಿ ಕೆಲವು ಕವಿಗಳು ಒಂದೊಂದು ಕಾವ್ಯದಲ್ಲಿ ಒಂದೊಂದೇ ಬಗೆಯ ಷಟ್ಪದಿಯನ್ನು ಬಳಿಸಿದ್ದಾರೆ. ಒಬ್ಬಿಬ್ಬರು ಎಲ್ಲವನ್ನೂ ಬಳಿಸಿದ್ದಾರೆ. ಷಟ್ಪದಿಗಳು ತಾಳ, ಲಯ, ಶ್ರುತಿಗಳಿಗೆ

ಒಳಪಟ್ಟು ಸುಶ್ರಾವ್ಯವಾಗುವಂತೆ, ಹಾಡುಗಬ್ಬಕ್ಕೆ ತಕ್ಕುದಾದ ಸಾಧನಗಳಾಗಿವೆ. ಪ್ರತಿಯೊಂದು ಪದ್ಯಕ್ಕೂ ಆರು ಸಾಲುಗಳು. ಈ ಆರೂಸಾಲುಗಳಲ್ಲಿ ಪೂರ್ವಾರ್ಧದಂತೆಯೇ ಉತ್ತರಾರ್ಧವಿರುತ್ತದೆ. ಎಂದರೆ ೧–೪, ೨–೫, ೩–೬ ಸಾಲುಗಳು ಇರುತ್ತವೆ. ಷಟ್ಪದಿಯಲ್ಲಿ ೧–೨, ೪–೫ ಚರಣಗಳು ಲಘುಚರಣಗಳು, ೩–೬ ದೀರ್ಘಚರಣಗಳು. ಲಘುಚರಣಕ್ಕಿಂತ ದೀರ್ಘಚರಣವು ಒಂದುವರೆಯಷ್ಟು ದೊಡ್ಡದಿದ್ದು ಸಂಗೀತದ ಅನುಕೂಲತೆಗಾಗಿ, ಕೊನೆಗೊಂದು ಗುರುವಿನಿಂದ ಕೂಡಿರುತ್ತದೆ.

## ತ್ರಿಪದಿ ಹಾಗು ಸಾಂಗತ್ಯ

**ತ್ರಿಪದಿಯು** ಕನ್ನಡ ಸಾಹಿತ್ಯದ **ತಾಯಿಬೇರು.** ಇದು ಶುದ್ಧ **ಕನ್ನಡ ಛಂದಸ್ಸು.** ಜನಜೀವನದಲ್ಲಿದ್ದುದು. ಜನಸಾಮಾನ್ಯರ ಒಳಿಕೆಯಲ್ಲಿರುವುದೇ ಶಿಲಾಶಾಸನಗಳಲ್ಲಿ ಮೂಡಿವೆ. ೭ನೇ ಶತಮಾನದ ಬದಾಮಿಯ ಶಾಸನದಲ್ಲಿ ಮೊದಲಿಗೆ ತ್ರಿಪದಿಯು ಕಾಣುತ್ತದೆ. ಮನೆಮನೆಗಳಲ್ಲಿ ಕುಟ್ಟುವಾಗ, ಬೀಸುವಾಗ, ಮನೆಗೆಲಸಗಳನ್ನು ಮಾಡುವಾಗ ಹಾಡಿಕೊಳ್ಳುವ ಗೀತವಿದು. ಇದನ್ನು ನಮ್ಮ **ಚಂಪೂಕಾವ್ಯಗಳಲ್ಲಿಯೂ** ನೋಡಬಹುದು. ಸೂಳೆಯರ ನೀತಿಯನ್ನು ವರ್ಣಿಸುವಾಗ ಅವರ ಬಾಯಿಯಲ್ಲಿ ತ್ರಿಪದಿಯನ್ನು ಹಾಕಿದುದು ಕಂಡುಬರುತ್ತದೆ. **ಅಭಿಲಷಿತಾರ್ಥ ಚಿಂತಾಮಣಿಯು** ತನ್ನ **ಮಾನಸೋಲ್ಲಾಸದಲ್ಲಿ** ಕನ್ನಡತಿಯರು ಕುಟ್ಟುವ ಬೀಸುವ ಹಾಡುಗಳನ್ನು ಹೇಳುತ್ತಾನೆ. ನಮ್ಮ ಹಳ್ಳಿಯ ಸಾಹಿತ್ಯವೆಲ್ಲವೂ ಬಹುತರವಾಗಿ ಈ ತ್ರಿಪದಿಯಲ್ಲಿಯೇ ಕಾಣುತ್ತದೆ. ಮನುಷ್ಯನ ಸತ್ಯಾನುಭವ ಹಾಗು ರಸಾನುಭವ, ಆಕಾಂಕ್ಷೆ ಹಾಗು ಉಪದೇಶಗಳನ್ನು ಸ್ವಲ್ಪದರಲ್ಲಿ ಹೇಳುವದಕ್ಕೆ-ಹಾಡಿಕೊಳ್ಳುವದಕ್ಕೆ ತ್ರಿಪದಿಯು ಒಳ್ಳೇ ಸಾಧನವಿದೆ. ಆದುದರಿಂದಲೇ ನೀತಿಯನ್ನು ಹೇಳುವದಕ್ಕೆ, ಕಾಲಜ್ಞಾನವನ್ನು ಸಾರುವದಕ್ಕೆ, ತ್ರಿಪದಿಯನ್ನು ಉಪಯೋಗಿಸಿದ್ದುಂಟು. ಸರ್ವಜ್ಞನ ಕೃತಿಗಳಿಂದಲೇ ತ್ರಿಪದಿಯು ಲೋಕಕ್ಕೆಲ್ಲ ಗೊತ್ತಾಗಿದೆ. ಆದರೆ ತ್ರಿಪದಿಯ ಜನ್ಮವು ಬಹುಪ್ರಾಚೀನ. ಅವನ

ಕಾಲಕ್ಕಿಂತಲೂ ೩೦೦ ವರ್ಷಗಳ ಪೂರ್ವದಲ್ಲಿಯೇ ತ್ರಿಪದಿಯಲ್ಲಿ ಗ್ರಂಥ ರಚನೆಗೆ ಪ್ರಾರಂಭವಾಗಿದೆ.

ಕರಸ್ಥಳದ ನಾಗದೇವನ (೧೪೩೦) **ಕರಸ್ಥಳ ನಾಗದೇವ ತ್ರಿಪದಿ,** ನಿಜಗುಣಶಿವಯೋಗಿಗಳ (೧೫೦೦) **ಅರವತ್ತುಮೂರರ ತ್ರಿಪದಿ,** ವಿರತ ಮಹಲಿಂಗದೇವನ (೧೫೦೦) **ಗುರುಬೋಧಾಮೃತ,** ಮಲ್ಲಿಕಾರ್ಜುನ ರಾಯನ **ಚೋರಕಥೆ, ಸರ್ವಜ್ಞನ ತ್ರಿಪದಿಗಳು** ಪ್ರಸಿದ್ಧವಾಗಿವೆ.

**ಸರ್ವಜ್ಞನೇ ತ್ರಿಪದಿಯ ಸೀಮಾಪುರುಷ.** ಅವನ ವಿಲಕ್ಷಣ ವಾಕ್‌ಸರಣಿ, ಸಮಾಜವನ್ನು ಬಡಿದೆಬ್ಬಿಸುವ ಧಿಟ್ಟತನ, ತತ್ವಜ್ಞಾನ, ನೀತಿ, ಕಾಲಜ್ಞಾನ, ಜ್ಯೋತಿಷ್ಯಗಳಲ್ಲಿರುವ ಅವನ ಅಗಾಧಜ್ಞಾನ, ಇವು ನೋಡತಕ್ಕಂಥವಿವೆ. ಅವನ ಒಂದೊಂದು ಮಾತು, ಹಸಿಯುಗೋಡೆ ಯಲ್ಲಿ ಹರಳು ನಟ್ಟಂತೆ ಮನಸ್ಸಿನಲ್ಲಿ ನಟ್ಟುಬಿಡುತ್ತವೆ. ಆದುದರಿಂದಲೇ ಹಳ್ಳಿಗರ ನಾಲಿಗೆಯ ಮೇಲೆ ಇಂದು ಸರ್ವಜ್ಞನು ನಲಿದಾಡುತ್ತಲಿದ್ದಾನೆ. ಜೀವತುಂಬುತ್ತಲಿದ್ದಾನೆ.

ಸರ್ವಜ್ಞನ ವೈಶಿಷ್ಟ್ಯವು ಉಳಿದವುಗಳಲ್ಲಿಲ್ಲ. ಅವೆಲ್ಲವೂ ಕೇವಲ ಮತಪ್ರಚಾರಕ ಗ್ರಂಥಗಳು. ಕರಸ್ಥಳದ ನಾಗದೇವ ತ್ರಿಪದಿಯಲ್ಲಿ ವೀರ ಶೈವ ಸಿದ್ಧಾಂತವನ್ನು ಹೇಳಿದೆ. **ಅರವತ್ತುಮೂರು ತ್ರಿಪದಿಗಳು** ಪುರಾತನರ ಸ್ತುತಿರೂಪವಾಗಿವೆ. **ಗುರುಬೋಧಾಮೃತದಲ್ಲಿ** ವೈರಾಗ್ಯವು ವರ್ಣಿಸಲ್ಪಟ್ಟಿದೆ. ಚೋರಕಥೆಯಲ್ಲಿ ರತ್ನಪುರಿಯನ್ನು ಆಳುತ್ತಿದ್ದ ವಜ್ರಮುಕುಟರಾಯನ ಇಬ್ಬರು ಮಕ್ಕಳು ಚೋರರಾದ ಕಥೆಯಿದೆ.

ಸರ್ವಜ್ಞನು ಮಾತ್ರ ಎಲ್ಲ ಜಾತಿ-ಮತ-ಪಂಥಗಳವರಿಗೆ ಪ್ರಿಯ ನಾಗಿದ್ದಾನೆ.

ತ್ರಿಪದಿಯು ಶುದ್ಧ ಕನ್ನಡಛಂದಸ್ಸು. ೫ ಮಾತ್ರೆಯ ೪ ಗಣಗಳು ಮೊದಲನೆಯ ಚರಣದಲ್ಲಿ, ೫ + ೩ + ೫ + ೫ ಹೀಗೆ ಮಾತ್ರೆಗಳು ಎರಡನೇ ಚರಣದಲ್ಲಿ, ೫ + ೩ + ೫ ಮಾತ್ರೆಗಳು ೩ನೇ ಚರಣದಲ್ಲಿರುತ್ತವೆ.

೭ನೇ ಶತಮಾನದ ತ್ರಿಪದಿ

ಬಾದಾಮಿಯ ಶಾಸನ.

ಸಾಧುವಿಗೆ ಸಾಧು, ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ | ವಿಪರೀತನ್
ಮಾಧವನೀತನ್ ಪೆರನಿಲ್ಲ ||

## ಸಾಂಗತ್ಯ

ಸಾಂಗತ್ಯಗಳು ಹಾಡುಗಬ್ಬಕ್ಕೆ ಒಳ್ಳೇ ಅನುಕೂಲವಾದವುಗಳು. ಜನಪದ ಸಾಹಿತ್ಯವು ಬಹುತರವಾಗಿ, ತ್ರಿಪದಿ, ಸಾಂಗತ್ಯಗಳಲ್ಲಿಯೇ ಇರುತ್ತದೆ. ಇದು ಶುದ್ಧ ಕನ್ನಡಛಂದಸ್ಸು. ಸಂಪ್ರದಾಯ ಮಾನ್ಯವಿಲ್ಲದವರು ಇದನ್ನು ಆಶ್ರಯಿಸುವದು ಸ್ವಾಭಾವಿಕ.

೧೨ನೇ ಶತಮಾನದಲ್ಲಿ ಕ್ರಾಂತಿಯಾಗಿ, ಸಾಹಿತ್ಯವು ಜನಪದದ ಕಡೆಗೆ ತಿರುಗಿದೊಡನೆಯೇ ಸಾಂಗತ್ಯವು ಸಾಹಿತ್ಯಕ್ಷೇತ್ರದಲ್ಲಿ ಬೆಳಗ ಹತ್ತಿತು. ಯುಗಧರ್ಮವು ಪ್ರಬಲವಾದುದು. **ಶಿಶುಮಾಯಣ** ನಂಥ ಜೈನ ಪಂಡಿತನು ಕೂಡ ಸಂಪ್ರದಾಯವನ್ನು ಬದಿಗಿರಿಸಿ **ಸಾಂಗತ್ಯದಲ್ಲಿ** ಗ್ರಂಥಗಳನ್ನು ಬರೆಯಲು ಮುಂದಾದನು. ಶಿಶುಮಾಯಣನೇ ಸಾಂಗತ್ಯಕಾವ್ಯಕ್ಕೆ ಮೊದಲಿಗನು. ೧೫ನೇ ಶತಮಾನದಿಂದಲೇ ಸಾಂಗತ್ಯ ಗ್ರಂಥಕ್ಕೆ ಪ್ರಾರಂಭವಾಯಿತು. **ರತ್ನಾಕರವರ್ಣಿ, ಚಂದ್ರಮ, ಕನಕದಾಸ, ಹೊನ್ನಮ್ಮ** ಇವರೇ ಈ ಕಾಲದ ಸೀಮಾಪುರುಷರು.

ಸಾಂಗತ್ಯದಲ್ಲಿ ಪುರಾಣಗಳೂ, ಐತಿಹಾಸಿಕ-ಪುರುಷರ ಚರಿತ್ರೆಗಳೂ, ತಾತ್ವಿಕ, ನೀತಿಯ ಗ್ರಂಥಗಳೂ ಇವೆ.

ಪುರಾಣಗಳಲ್ಲಿ, ರತ್ನಾಕರವರ್ಣಿಯ **ಭರತೇಶವೈಭವವೂ** ಚಂದ್ರಮನ **ಗೊಮ್ಮಟೇಶ್ವರ ಚರಿತ್ರೆಯೂ** ವಿರೂಪರಾಜನ **ತ್ರಿಭುವನ ತಿಲಕವೂ** ಲಿಂಗನ **ಚೋಳರಾಜಸಾಂಗತ್ಯ**ಗಳೂ ಪ್ರಸಿದ್ಧವಾಗಿವೆ. **ಶಿಶುಮಾಯಣನ** ಅಂಜನಾ ಚರಿತ್ರೆಯು ಒಂದು ಬಗೆಯ ಪುರಾಣವೇ.

ರತ್ನಾಕರ ವರ್ಣಿಯು ತನ್ನ ಭರತೇಶ ವೈಭವಕ್ಕೆ ಪ್ರಥಮತೀರ್ಥಂಕರನ ಹಿರಿಯ ಮಗನಾದ ಭರತನನ್ನೇ ಕಥಾನಾಯಕನನ್ನು ಮಾಡಿ

ಕೊಂಡಿದ್ದಾನೆ "ಗಣನೆಯಿಲ್ಲದ ರಾಜ್ಯಸುಖದೊಳೋಲಾಡಿ ಧಾರಿಣಿ ಮೆಚ್ಚೆ. ಜನಯೋಗಿ, ಕ್ಷಣಕೆ ಕರ್ಮವಸುಟ್ಟು, ಜಿನನಾದ" ವೃಷಭನ ಇದರಲ್ಲಿ ವರ್ಣಿಸಲ್ಪಟ್ಟಿದೆ. ಇದು ಬಹುದೊಡ್ಡ ಗ್ರಂಥ. ೮೦ ಸಂಧಿ ಗಳಿಂದ ಕೂಡಿದೆ. ಇಷ್ಟೊಂದು ದೊಡ್ಡ ಸಾಂಗತ್ಯ ಗ್ರಂಥವು ಬಹುಶಃ ಇನ್ನೊಂದು ಇಲ್ಲ. ಇದರಲ್ಲಿ ಚಿತ್ರವಿಚಿತ್ರವಾದ ವರ್ಣನೆಗಳಿವೆ. ವರ್ಣಿಸುವಲ್ಲಿ ಹೊಸಬಗೆಯಿದೆ, ನವರಸ ಪುಷ್ಟಿಯಿದೆ, ತತ್ವಜ್ಞಾನವಿದೆ. ಕವಿಯು ಸರಳವಾದ, ಸಹಜ ಮನೋಹರವಾದ ಶೈಲಿಯು, ವಾಚಕರನ್ನು ತೇಲಿಸಿಕೊಂಡು ಮುಂದಕ್ಕೆ ಒಯ್ಯುತ್ತದೆ. ಎಂತಹ ದೊಡ್ಡ ವಿಷಯ ವಿದ್ದರೂ ಕೆಲವೇ ಪದಗಳಲ್ಲಿ ಎಲ್ಲವನ್ನೂ ಹೇಳುವ ಅದ್ಭುತವಾದ ಶಕ್ತಿಯು ರತ್ನಾಕರ ವರ್ಣಿಯಲ್ಲಿದೆ. ಕವಿಯು ತನ್ನ ಅದ್ಭುತವಾದ ಕಾವ್ಯ ಸಾಮರ್ಥ್ಯದಿಂದ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟಸ್ಥಾನವನ್ನು ಪಡೆದಿರುತ್ತಾನೆ. ಗೊಮ್ಮಟೇಶ್ವರ ಚರಿತೆಗೆ, ಕಾರ್ಕಳದ ಗೊಮ್ಮಟೇಶ್ವರನೆ ಕಥಾನಾಯಕ. ತ್ರಿಭುವನತಿಲಕಕ್ಕೂ ಚೋಳರಾಜಸಾಂಗತ್ಯಕ್ಕೂ, ಶಿವಭಕ್ತರೇ ನಾಯಕಿಯರು. ಇವೆಲ್ಲವೂ ಒಳ್ಳೇ ರಸವತ್ತಾದ ಲಲಿತವಾದ ಕಾವ್ಯಗಳು.

ಸಾಂಗತ್ಯದ ಕಾವ್ಯಗಳಲ್ಲಿ ಇನ್ನೊಂದು ವಿಶೇಷ ಉಂಟು. ನಮ್ಮ ಸಾಹಿತ್ಯದಲ್ಲಿ ಐತಿಹಾಸಿಕ ಚರಿತ್ರೆಗಳು ವಿರಳ. ನಂಜುಂಡನ **ಕುಮಾರ ರಾಮನ** ಚರಿತ್ರವೂ ಗೋವಿಂದ ವೈದ್ಯನ **ಕಂಠೀರವನರಸರಾಜ ಚರಿತ್ರೆ**ಯೂ ಈ ಕಾಲದ ವೈಶಿಷ್ಟ್ಯವೆಂದು ಹೇಳಬಹುದು. ನಂಜುಂಡನು ವಿಜಯನಗರದ ಅರಸನಾದ ಕಂಪರಾಜನ ಮಗನಾದ **ಕುಮಾರ ರಾಮನ** ಚರಿತ್ರೆಯನ್ನು ಬಹು ಮನೋಹರವಾಗಿ ವರ್ಣಿಸಿದ್ದಾನೆ. ಕಾವ್ಯ ಬಂಧವು ಬಹು ಸೊಗಸಾಗಿದೆ. ಕಂಠೀರವನರಸರಾಜರ ವಿಜಯಕ್ಕೆ, ಅವರೇ ನಾಯಕರು, "ತರುಣೀಜನ ನೇತ್ರೋತ್ಪಲ ಚಂದ್ರನ, ಸರಸ ವಿದ್ಯಾವಿಶಾರದನ, ನರಸರಾಜೇಂದ್ರನ, ಮೈಸೂರೊಡೆಯನ, ಚರಿತೆ ಯನ್ನು ಇಲ್ಲಿ ಹೇಳಿದೆ— ಕವಿಯ ವೀರದಾಟಿಯನ್ನೂ ವರ್ಣನಾಶಕ್ತಿ ಯನ್ನೂ ಇಲ್ಲಿ ನೋಡಬೇಕು.

ಹೊನ್ನಮ್ಮನ **ಹದಿಬದೆಯ ಧರ್ಮವು,** ಪ್ರಸಿದ್ಧವಾದ ನೀತಿಯ

ಗ್ರಂಥ. ರಾಮಾಯಣ, ಮಹಾಭಾರತ, ಸ್ಮೃತಿಗಳಲ್ಲಿಯ ಸ್ತ್ರೀ ನೀತಿಯ ನ್ನೆಲ್ಲ ಸಂಗ್ರಹಿಸಿ, ಸರಸವಾಗಿ ವರ್ಣಿಸಿದ್ದಾಳೆ. ಪತಿವ್ರತಾ ಧರ್ಮದ ವಿಸ್ತೃತವಾದ ವಿವರಣೆಯನ್ನು ಇಲ್ಲಿ ನೋಡಬಹುದು. ಹೊನ್ನಮ್ಮನ ಕಾವ್ಯದ ಹೆಣಿಕೆಯೂ ಹೇಳುವರೀತಿಯೂ ಮೃದುಮಧುರವಾಗಿದೆ. ಹೆಣ್ಣಿನಕರಳು.

ಸಾಂಗತ್ಯವು ಶುದ್ಧ ಕನ್ನಡ ಛಂದಸ್ಸು. ತ್ರಿಪದಿಯೇ ಹಿಗ್ಗಿ ಸಾಂಗತ್ಯವಾಗಿದೆ. ತ್ರಿಪದಿಯ ಎರಡನೇ ಚರಣದ ಮೊದಲಿನ ಮೂರು ಗಣಕ್ಕೆ ನಿಲ್ಲಿಸಿ, ಅದನ್ನು ಎರಡನೇ ಚರಣದಂತೆ ಮಾಡಿ, ಮತ್ತೆ ಮೊದಲಿ ನಿಂದಲೂ ಎರಡನೇ ಚರಣವನ್ನು ಪ್ರಾರಂಭಿಸಿ ಮುಗಿಸಿ, ಮೂರನೆ ಚರಣ ದಂತೆ ಮಾಡುವರು. ಉಳಿದ ಚರಣವು ಆಗ ನಾಲ್ಕನೇ ಚರಣವಾಗಿ ಪರಿಣಮಿಸುವದು. ತ್ರಿಪದಿಯು ಹಿಗ್ಗಿ ಚೌಪದಿ (ಸಾಂಗತ್ಯ) ಯಾದುದು ಹೀಗೆ.

### ತ್ರಿಪದಿ

ಆಗ ಬಾ ಈಗ ಬಾ ಹೋಗಿ ಬಾ ಎನ್ನದೆ ।
ಆಗಲೆ ಕರೆದು ಕೊಡುವವನ ದಾನ ಹೊ ।
ನ್ನಾಗದೆ ಬಿಡದು ಸರ್ವಜ್ಞ ॥

### ತ್ರಿಪದಿಯು (ಚೌಪದಿ) ಸಾಂಗತ್ಯವಾದುದು.

ಆಗ ಬಾ ಈಗ ಬಾ ಹೋಗಿ ಬಾ ಎನ್ನದೆ ।
ಆಗಲೇ ಕರೆದು ಕೊಡುವವನ ।
ಆಗಲೇ ಕರೆದು ಕೊಡುವವನ ದಾನ ಹೊ ।
ನ್ನಾಗದೆ ಬಿಡದು ಸರ್ವಜ್ಞ ॥

ಹೀಗೆ ಅಂದದ್ದನ್ನೆ ಅನ್ನುವದಕ್ಕಿಂತ ಹೊಸದನ್ನು ಹೇಳಬೇಕೆಂದು ದ್ವಿರುಕ್ತಿಯ ಚರಣವನ್ನು ಬಿಡಲು ಸುರುವು ಮಾಡಿದರು.

### ಸಾಂಗತ

ಕಾಲನ ಗಂಡ, ಕರ್ಮದ ಮಿಂಡ ದುರ್ಮೋಹ ।
ಜಾಲಾಂಧಕಾರ ಮಾರ್ತಾಂಡ ।
ಲೀಲಾಂಗ ಮತಿದೋರು ನಿಜದೋರು ಸುಜ್ಞಾನ ।
ಲೋಲ ನಿರಂಜನ ಸಿದ್ಧ ॥

ಹೀಗೆ ಚೌಪದಿಯನ್ನೇ ಕನ್ನಡ ಸಾಹಿತ್ಯದ ಕ್ರಾಂತಿಕಾಲದಲ್ಲಿ ಸಾಂಗತ್ಯವೆಂಬ ಹೆಸರನ್ನಿಟ್ಟು, ಲಿಖಿತವಾಙ್ಮಯಕ್ಕೆ ತೆಗೆದುಕೊಂಡಿದ್ದಾರೆ.

ಸಾಂಗತ್ಯದ ಲಕ್ಷಣ :— ಇದರ ಒಂದು ಮೂರನೆಯ ಪಾದಗಳಲ್ಲಿ ೬ ಮಾತ್ರೆಯ ೪ ಗಣಗಳು, ( ೪ ವಿಷ್ಣು ಗಣಗಳು ) ಎರಡನೇ ನಾಲ್ಕನೆಯ ಪಾದಗಳಲ್ಲಿ ೬ ಮಾತ್ರೆಯ ಎರಡು ಮತ್ತು ೪ ಮಾತ್ರೆಯ ಒಂದು ಗಣವು (ಎರಡು ವಿಷ್ಣುಗಣ ಕೊನೆಯಲ್ಲಿ ಒಂದು ಬ್ರಹ್ಮಗಣ) ಇರಬೇಕು. ಈ ಸಾಂಗತ್ಯವನ್ನು ಅಷ್ಟ ತಾಳದ ಗತಿಯಲ್ಲಿ ಹೇಳಲಿಕ್ಕೆ ಬರುವದು.

## ಶತಕಗಳು

ಕನ್ನಡ ಸಾಹಿತ್ಯದಲ್ಲಿ ತ್ರಿಪದಿಗಳು ಒಂದು ಸ್ಥಾನವನ್ನು ಪಡೆದಂತೆ ಶತಕಗಳೂ ಒಂದು ಬಗೆಯ ಸ್ಥಾನವನ್ನು ಪಡೆದಿವೆ.

ಈ ಶತಕಗಳು ೧೧ನೇ ಶತಮಾನದಿಂದಲೇ ದೊರೆಯುತ್ತವೆ. ಇವು ಬಗೆ ಬಗೆಯ ವೃತ್ತ, ಷಟ್ಪದಿ, ಕಂದಗಳಲ್ಲಿ ದೊರೆಯುತ್ತವೆ. ಇವುಗಳಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ವರ್ಣಿಸುವ ಶತಕಗಳು ಹೆಚ್ಚು. ಇವುಗಳಲ್ಲಿ ಕೆಲವು ಪಂಪಾವಿರೂಪನ ಸ್ತುತಿಗಳಿವೆ. ಹಲವು ವೀರಶೈವ ಮತದ ಹಾಗು ಶಿವಸರ್ವೋತ್ತಮತ್ವದ ಪ್ರತಿಪಾದನೆಯನ್ನು ಮಾಡುತ್ತವೆ. ತ್ರಿಲೋಕ ಶತಕದಂಥ ಕೆಲವು ಜೈನ ಮತದ ವರ್ಣನೆಗಳನ್ನು ಹೇಳುತ್ತವೆ.

ಇವುಗಳಲ್ಲಿ ರತ್ನಾಕರಾಧೀಶ್ವರ, ಅಪರಾಜಿತೇಶ್ವರ, ಸೋಮೇಶ್ವರವೆಂಬ ಶತಕತ್ರಯಗಳು ಜನಜೀವನದಲ್ಲಿ ನಿಂತಿವೆ. ಇವುಗಳ ಶೈಲಿಯೂ ಪದಲಾಲಿತ್ಯವೂ ಗಂಭೀರವಾಗಿವೆ.

ನಾಗವರ್ಮನ (೧೦೭೦) 'ಚಂದ್ರಚೂಡಾಮಣಿ ಶತಕ, ಹರಿಹರನ (೧೧೬೫) ' ಪಂಪಾಶತಕ ' ಪುಲಿಗೆರೆಯ ಸೋಮನಾಥನ (೧೧೯೫) ' ಸೋಮೇಶ್ವರ ಶತಕ ' ಮಗ್ಗೆಯಮಾಯಿದೇವನ (೧೪೩೦) ಶಿವಾಧವ, 'ಶಿವಾವಲ್ಲಭ, 'ಏಪುರಿ, ಶತಕಗಳು, ರತ್ನಾಕರವರ್ಣಿಯ (೧೫೫೭) ತ್ರಿಲೋಕ ಹಾಗು ಅಪರಾಜಿತೇಶ್ವರ ಶತಕಗಳು, ಚೆನ್ನಮಲ್ಲಿಕಾರ್ಜುನನ (೧೫೬೦) 'ಶಿವಮಹಿಮಾ ಶತಕ, ಹಿರಿಯಾರುರಂಗನ (೧೬೫೦) 'ಪಂಪಾವಿರೂಪನ ಶತಕ, ಲಕ್ಷ್ಮಯ್ಯನ ( ೧೭೦೦ ) ಪಶ್ಚಿಮರಂಗಧಾಮ ಶತಕ, ವೀರಭದ್ರರಾಜನ ಶತಕಗಳು, ಶಂಕರ ದೇವನ (೧೬೨೦) ಶಂಕರ ಶತಕ,

ಕಾಡಸಿದ್ಧೇಶನ (೧೭೨೫) ಇಷ್ಟು ಶತಕಗಳು ಪ್ರಸಿದ್ಧವಾಗಿವೆ. ರತ್ನಾಕರ ಶತಕವನ್ನಂತೂ ಕೇಳದವರು ಇಲ್ಲ.

ಶತಕದ ರೀತಿಯಲ್ಲಿಯೇ ಬರೆದ ನೀತಿ ಗ್ರಂಥಗಳು ಕೆಲವು ಇವೆ. ನಮ್ಮ ಸಾಹಿತ್ಯದಲ್ಲಿ, **ಸಿದ್ಧನೀತಿ, ವಿರೂಪಾಕ್ಷನೀತಿ, ಚೂಡಾರತ್ನ** ಮೊದಲಾದವು ಪ್ರಸಿದ್ಧವಾಗಿವೆ.

## ಗದ್ಯಕಾವ್ಯಗಳು

ಗದ್ಯಕಾವ್ಯವೆಂಬ ಹೆಸರು ಇತ್ತೀಚಿನ ಕೆಲವರಿಗೆ ಆಶ್ಚರ್ಯವನ್ನುಂಟುಮಾಡಬಹುದು. ರಸ, ಅಲಂಕಾರಗಳಿಂದ ಯುಕ್ತವಾದ ಛಂದೋಬದ್ಧವಾದ ಕಾವ್ಯವಿರುವಂತೆ, ರಸಮಯವಾಗಿ ವರ್ಣಿಸಿದ ಗದ್ಯಕಾವ್ಯಗಳೂ ಕನ್ನಡ ಸಾಹಿತ್ಯದಲ್ಲುಂಟು.

ಕ್ರಿ. ಶ. ೪೫೦ರಲ್ಲಿ ದೊರೆತ ಹಲ್ಮಿಡಿಶಾಸನವು ಗದ್ಯದಲ್ಲಿದೆ. ಅದರ ಭಾಷೆಯು ಸರಸವಾಗಿದೆ. ಅದರ ಒಲವು ಕಾವ್ಯದ ಕಡೆಗೆ ಇದ್ದುದು ಕಾಣುತ್ತದೆ. ೬–೭ನೇ ಶತಮಾನಗಳಿಂದ ಶಿಲಾಶಾಸನಗಳಲ್ಲಿರುವ ಗದ್ಯವು ಸೊಗಸಾದ ಕಾವ್ಯಗಳಂತೆ ಇದೆ ಎಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಕನ್ನಡದಲ್ಲಿ ಉಪಲಬ್ಧವಿರುವ ಮೊದಲನೆಯ ಗದ್ಯ ಕಾವ್ಯವು ಕ್ರಿ. ೬೫೦ರಲ್ಲಿ ಬರೆಯಲ್ಪಟ್ಟ ತುಂಬಲೂರಾಚಾರ್ಯರ ೯೬ ಗ್ರಂಥ ಪರಿಮಿತಿಯುಳ್ಳ **ಚೂಡಾಮಣಿ** ಗ್ರಂಥವು ನಮಗೆ ದೊರೆತಿಲ್ಲ. ನೃಪತುಂಗನು ತನ್ನ ಪೂರ್ವಜರಾದ **ವಿಮಳೋದಯ ನಾಗಾರ್ಜುನ, ಜಯಬಂಧು, ದುರ್ವಿನೀತಾ**ದಿಗಳು ಗದ್ಯಕಾವ್ಯಕಾರರೆಂದು ಹೇಳುತ್ತಾನೆ. ಅವರ ಗ್ರಂಥಗಳೂ ಉಪಲಬ್ಧವಿಲ್ಲ.

ಚಂಪೂಕಾರರು ತಮ್ಮ ಗ್ರಂಥಗಳಲ್ಲಿ ಗದ್ಯವನ್ನು ಉಪಯೋಗಿಸುತ್ತಾರೆ. ಅದೆಲ್ಲವೂ ಕಾವ್ಯಮಯವಾಗಿದೆ ಎಂಬುದನ್ನು ಹೇಳಲಿಕ್ಕೇಬೇಡ. ದುರ್ಗಸಿಂಹನ ಪಂಚತಂತ್ರ ಕಥಾಗ್ರಂಥವಾದುದರಿಂದ ಗದ್ಯವು ಹೆಚ್ಚು ಮಿಶ್ರವಾಗಿದೆ. ಸರಸವಾದ ಗದ್ಯವಿದೆ.

ಕನ್ನಡ ಸಾಹಿತ್ಯದಲ್ಲಿ ಉಪಲಬ್ಧವಾಗಿರುವ ಮೊದಲನೆಯ ಗ್ರಂಥವೆಂದರೆ, ಚಾವುಂಡರಾಯನ (೯೭೮) **ಚಾವುಂಡರಾಯ ಪುರಾಣ.** ಇದು ಚತುರ್ವಿಂಶತಿ ತೀರ್ಥಂಕರರ ಚರಿತವು. ಗ್ರಂಥಾಂತ್ಯದಲ್ಲಿ

‘ ಇದು ಸಕಲಭುವನ ಜನವಂದ್ಯಮಾನ ಸಂಯಮ ಸಮಾಧಾನ ವಿಜಿತ ದುರಿತಾರಾತಿಸೇನ, ಶ್ರೀಮದಜಿತಸೇನ ಬಟ್ಟಾರಕ, ಪಾದಪದ್ಮ ಪ್ರಸಾದಾಸಾದಿತ ರತ್ನತ್ರಯಾಲಂಕೃತ ಧರ್ಮವಿಜಯ ಶ್ರೀಮಚ್ಚಾವುಂಡರಾಯ ವಿರಚಿತಮಪ್ಪ, ತ್ರಿಷಷ್ಟಿ ಲಕ್ಷಣ ಮಹಾಪುರಾಣದೊಳ್ ’ ಎಂದು ಹೇಳುತ್ತಾನೆ. ಇದರಿಂದ ಇವನ ಭಾಷೆಯ ಬಿಗುವು ಚನ್ನಾಗಿ ಗೊತ್ತಾಗುತ್ತದೆ.

ಶಾಂತಲಿಂಗ ದೇಸಿಕನ (೧೬೭೨) ‘ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ, ಚಕ್ಕಭೂಪಾಲನ ‘ ಭಾರತ ಕಥಾಸಂಗ್ರಹ, ಚಿಕದೇವರಾಜನ (೧೬೭೨) ‘ ಚಿಕದೇವರಾಜ ಬಿನ್ನಪ, ತಿರುಮಲಾರ್ಯರ (೧೬೯೮) ‘ ಚಿಕದೇವರಾಜ ವಂಶಾವಳಿ, ದೊಡ್ಡತಿಮ್ಮದಾಸರ (೧೭೦೦) ‘ ರಾಮಾನುಜವಿಜಯ, ಯಾದವರ (೧೮೦೦) ಕಲಾವತಿ ಪರಿಣಯ, ಮುಮ್ಮಡಿ ಕೃಷ್ಣರಾಜರ ‘ ವತ್ಸರಾಜನ ಕಥೆ, ಕೆಂಪು ನಾರಾಯಣನ (೧೮೨೩) ‘ ಮುದ್ರಾಮಂಜೂಷ, ಗಳು ಪ್ರಸಿದ್ಧವಾಗಿವೆ.

ಇವುಗಳಲ್ಲಿ ಮತಪ್ರಚಾರಕ ಗ್ರಂಥಗಳೇ ಹೆಚ್ಚು. ಚಾವುಂಡರಾಯ ಪುರಾಣವು ಜೈನಪುರಾತನರ, ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರವು ವೀರಶೈವ ಪುರಾತನರ, ಕಥೆಗಳನ್ನು ಹೇಳುತ್ತವೆ. ಭಾರತ ಕಥಾಸಂಗ್ರಹವಂತೂ ಭಾರತವನ್ನು ಹೇಳುತ್ತದೆ. ರಾಮಾನುಜ ವಿಜಯವು ವಿಷ್ಣುಸರ್ವೋತ್ತಮತ್ವವನ್ನೂ ರಾಮಾನುಜ ಪಂಥವನ್ನೂ ಹೇಳುತ್ತದೆ. ಇವೆಲ್ಲವೂ ಒಳ್ಳೇ ಬಿಗುವುಳ್ಳ ಅಲಂಕಾರಿಕ ಭಾಷೆಯಲ್ಲಿವೆ.

ಇವುಗಳಲ್ಲಿ ಚಿಕದೇವರಾಜ ಬಿನ್ನಪವು ಅತ್ಯಂತ ಶ್ರೇಷ್ಠವಾಗಿದೆ. ಚಿಕದೇವರಾಜನ ಪ್ರತಿಭೆಯೂ ವರ್ಣನಾಶೈಲಿಯೂ, ಅವರ್ಣನೀಯ ವಿವೆ. ಶಬ್ದಜೋಡಣೆಯು ಕಿವಿಗೆ ಇಂಪಾಗಿದೆ. ಓದುವಾಗ ಮೈಮರೆಯುವದು.

ಮೇಲುಕೋಟೆಯ ನಾರಾಯಣದೇವರಿಗೆ, ಬಿನ್ನವಿಸಿಕೊಂಡ ೩೦ ಬಿನ್ನಹಗಳಿಂದ ಇದು ಕೂಡಿದೆ.

## ಆ ಕಾವ್ಯದ ಮಾದರಿಗೆಂದು

**"ಸಕಲ ಲೋಕನಿಯಾಮಕಾ ! ನೀನೀ ಸಂಸಾರದೊಳೋರೊರ್ವಂಗೆ ಪಟ್ಟಾಭಿಷೇಕಾದಿ ಸುಖಮಂ ಓರೊರ್ವಂಗೆ ಶಿರಶ್ಛೇದನಾದಿ ದುಃಖಮನೆಸಗುವುದರಿಂ ವಿಷಮನೆಂದುಂ, ಕರ್ಮಾನುಗುಣಮಾದ ಫಲಮನೀವುದರಿಂ, ಕರ್ಮಕ್ಕೆ ಪರತಂತ್ರನೆಂದುಂ, ಪಾಪಿಗಳ್ ಪಡುವ ದುಃಖಮಂ ಪರಿಹರಿಸದೆ ನೋಡುತಿರ್ಪುದರಿಂ ನಿರ್ದಯನೆಂದುಂ ಸ್ವಲ್ಪ ಬುದ್ಧಿಗಳ್ಗೆ ತೋರ್ಕುಂ"**

ಇದರಂತೆಯೇ ಚಿಕದೇವರಾಜ ವಂಶಾವಳಿಯೂ ಬಹುರಮಣೀಯವಾದ ಕಾವ್ಯವಿದೆ. ಬಂಧವು ಪ್ರೌಢವಾಗಿದೆ. ಒಮ್ಮೆ ಓದಿನೋಡಿದರೆ ಅದರ ಸವಿಯು ತಿಳಿಯುವದು.

ಚಿಕದೇವರಾಜನೂ, ತಿರುಮಲಾರ್ಯನೂ ಗದ್ಯಕಾವ್ಯಗಳ ಸೀಮಾಪುರುಷರೆಂದು ಹೇಳಬಹುದು.

# ೫. ನಾಟಕಗಳು

ಕನ್ನಡ ಸಾಹಿತ್ಯದಲ್ಲಿ ೧೨ನೆಯ ಶತಮಾನದ ವರೆಗೆ, ಒಂದೂ ನಾಟಕವು ದೊರೆಯದಿರುವದು ಆಶ್ಚರ್ಯದ ಮಾತಾಗಿದೆ. ಇಷ್ಟೇ ಅಲ್ಲ, **ಸಿಂಗರಾರ್ಯರ, 'ಮಿತ್ರವಿಂದಾ ಗೋವಿಂದ'** ಎಂಬ ನಾಟಕವು ಒಂದನ್ನು ಬಿಟ್ಟರೆ, ಮತ್ತೊಂದು ಗ್ರಂಥವಿಲ್ಲ. ಸಾಗರದಂತಿರುವ, ವಿಶಾಲವಾದ ಹಳಗನ್ನಡ ಸಾಹಿತ್ಯದಲ್ಲಿ ಈ ನಾಟಕಗಳು ಇಲ್ಲದಿರುವದು ವಿಚಾರಣೀಯ ಸಂಗತಿಯಾಗಿದೆ.

ಒಂಬತ್ತನೆಯ ಶತಮಾನಕ್ಕೆ ಮೊದಲೇ ಸಂಸ್ಕೃತದಲ್ಲಿ **ಅಶ್ವ ಘೋಷ, ಭಾಸ, ಕಾಳಿದಾಸ, ಶೂದ್ರಕ** ಮೊದಲಾದ ಮಹಾಕವಿಗಳು ನಾಟಕಗಳನ್ನು ಬರೆದು ಪ್ರಚಾರಗೊಳಿಸಿದ್ದರು. ಇವರನ್ನೇ ಆದರ್ಶ ವಾಗಿ ಇಟ್ಟುಕೊಂಡು ನಮ್ಮ ಕನ್ನಡ ಕವಿಗಳು ಈ ನಾಟಕಗಳನ್ನು ನೋಡಲಾರರೆ? ರನ್ನಕವಿಯು ಭಟ್ಟನಾರಾಯಣನ **'ವೇಣಿಸಂಹಾರ'** ವನ್ನು ಓದಿದ್ದನೆಂದು ಸಾಧಾರವಾಗಿ ಹೇಳಬಹುದು. ಹೀಗೆ ತಾವು ಓದಿದ ನಾಟಕಗಳನ್ನು ಏಕೆ ಬರೆಯಲಿಲ್ಲವೋ ತಿಳಿಯದು. ಇವರಿಗೆ ನಾಟಕಗಳನ್ನು ಬರೆಯಲು, ಸಾಮರ್ಥ್ಯವಿದ್ದಿಲ್ಲವೆನ್ನಬೇಕೆ? ಪಂಪರನ್ನರು ತಮ್ಮ ಕಾವ್ಯಗಳಲ್ಲಿ, ಹಲವು ಸಂದರ್ಭಗಳನ್ನು ಬಹಳ ಸುಂದರವಾಗಿ, ಕಣ್ಣೆದುರಿಗೆ ನಡೆದಂತೆ, ನಾಟಕೀಯವಾಗಿ ವರ್ಣಿಸಿದ್ದಾರೆ. ಪಂಪನು ಅರ್ಜುನನ ವಿದ್ಯಾಭ್ಯಾಸವನ್ನು ವರ್ಣಿಸುವಾಗ ಭರತ ಮುನಿಯು ನೃತ್ಯಶಾಸ್ತ್ರವನ್ನೂ ಹೇಳುತ್ತಾನೆ. ಹೀಗಿದ್ದರೂ ಇವರು ನಾಟಕಗಳನ್ನು ಬರೆಯದಿರಲು ಕಾರಣಗಳು ಏನು?

ನಿಜವಾಗಿಯೂ ವಿಚಾರ ಮಾಡಿದರೆ, ನಮ್ಮ ಜನಾಂಗವೇ ನಾಟ್ಯ ಜನಾಂಗ. **ನಟರೇ** ನಮ್ಮ ಮೊದಲಿಗರು. ಕುಣಿತವರೆಂದೇ ಈ ಜನಾಂಗದ ಕೀರ್ತಿ. ನೃತ್ಯ–ನಾಟಕವೇ ಅವರ ಜೀವನ. ನಮ್ಮ ಜನಜೀವನದಲ್ಲಿ, ನಾಟ್ಯವಿಲ್ಲೆಂದು ಹೇಳುವದು ಸರಿಯಾದೀತೇ?

ನಮ್ಮ ಸಾಹಿತ್ಯವೂ, ನಮ್ಮ ನಾಟ್ಯಮಯ ಜೀವನಕ್ಕೆ ಸಾಕ್ಷಿಯಾಗಿದೆ. ಕವಿರಾಜ ಮಾರ್ಗದಲ್ಲಿ ಬಂದಿರುವ '**ಪಗರಣ**' ವೆಂಬ ಶಬ್ದವು, 'ಪ್ರಕರ್ಣ' ವೆಂಬ ಶಬ್ದದ ತದ್ಭವ. ಪ್ರಕರ್ಣವು ನಾಟಕ ವಿಭಾಗ. ಇದಕ್ಕೆ ಇಷ್ಟು ದೂರಾನ್ವಯವು ಕಾರಣವಿಲ್ಲ. 'ಪಗರಣ' ಶಬ್ದವೇ ನಟನೆ, ನಾಟಕವೆಂದೆನಿಸುತ್ತದೆ. '**ಹಗರಣ**' ವೆಂಬ ಶಬ್ದವನ್ನು ನಾವು ಇಂದು ಬಳಸುತ್ತೇವೆ. ಇದಕ್ಕೆ ರೂಢಾರ್ಥವೇನಿದೆ' ಸೋಗು ಮಾಡುವದು, ಒಂದು ಬಗೆಯ ಭಾವಪ್ರದರ್ಶನೆ ಮಾಡುವದು, ನಟನೆಮಾಡುವದು ಎಂದಿಲ್ಲವೇ? ಪಂಪನು ತನ್ನ ಕಾವ್ಯದಲ್ಲಿ '**ಪಗರಣದ ರಸು**' ಎಂದು ಉಪಯೋಗಿಸಿದ್ದಾನೆ. ಅಂದರೆ ನಾಟಕದಲ್ಲಿಯ ಅರಸು ಎಂದರ್ಥ. ಸ್ವತಃ ಪಂಪನು ಅರ್ಜುನನು ಕಲಿತ ವಿದ್ಯೆಗಳನ್ನು ಹೇಳುವಾಗ ಭರತ ಮುನಿಯ ನೃತ್ಯ-ನಾಟಕ-ಶಾಸ್ತ್ರವನ್ನೂ ಕಲಿತನೆಂದು ಹೇಳುತ್ತಾನೆ. **ನಾಗಚಂದ್ರನ** (೧೧೦೦) ಕಾವ್ಯಗಳಲ್ಲಿ, **ನೃತ್ಯ, ನಾಟಕ-ರಂಗಭೂಮಿಗಳನ್ನೊಳಗೊಂಡ** ಉತ್ಪ್ರೇಕ್ಷೆ, ರೂಪಕಗಳು ದೊರೆಯುತ್ತವೆ. ನೇಮಿಚಂದ್ರನು (೧೧೭೦) ತಿಮಿರ ಜವನಿಕೆ ಓಸರಿಸಲು **ನರ್ತಕಿಯು ಸೂರೆಗೆಯ್ದು ಪುಷ್ಪಗಳಂತಿದ್ದ** ನಕ್ಷತ್ರಗಳನ್ನು ಬಣ್ಣಿಸುತ್ತಾನೆ. ಕೇಶಿರಾಜನು ಶಬ್ದಮಣಿದರ್ಪಣದಲ್ಲಿ, ಸತಿಸಪ್ತಮಿಯ ಉದಾಹರಣೆಯನ್ನು ಹೇಳುವಾಗ '**ಪಾತ್ರವಾಡೆ ವಾದಕಂ ಬಾಜಿಸಿದಂ**' ಎಂದು ಹೇಳಿದ್ದಾನೆ. ರಾಘವಾಂಕನ ಹರಿಶ್ಚಂದ್ರ ಕಾವ್ಯವಂತೂ ಒಂದು ನಾಟಕದಂತೆಯೆ ಇದೆ. ಕರ್ಣಪಾರ್ಯನ (೧೧೪೦) 'ಮಾಳವೀಮಾಧವ' ಕೇಶಿರಾಜನ (೧೨೬೦) 'ಸುಭದ್ರಾಹರಣ' ಹಾಗು ಪ್ರಬೋಧಚಂದ್ರೋದಯವೂ, ನಾಟಕಗಳಾಗಿರಬೇಕೆಂದು ಕವಿಚರಿತೆಕಾರರು ಊಹಿಸುತ್ತಾರೆ.

ವಿಜಯನಗರದ ಅರಸರ ನಾಟಕ ಪ್ರೀತಿಯಂತೂ ಇತಿಹಾಸ ಪ್ರಸಿದ್ಧವೆ. ಅನೇಕರಾಜರು ಸ್ವತಃ ಸಂಸ್ಕೃತ ನಾಟಕಗಳನ್ನು ಬರೆದು ಅರಮನೆಗಳಲ್ಲಿ ಆಡಿಸುತ್ತಿದ್ದರು. ಕೃಷ್ಣದೇವರಾಯನನ್ನೇ ತೆಗೆದುಕೊಂಡರೆ, ಅವನೇ ಸ್ವತಃ '**ಜಾಂಬವತೀ**' ಎಂಬ ಸಂಸ್ಕೃತ ನಾಟಕವನ್ನು ಬರೆದು ಆಡಿದುದು ಪ್ರಸಿದ್ಧವಿದೆ. ಇವನು ರಸಿಕನೂ,

ಸಂಗೀತ ಪ್ರಿಯನೂ ಇದ್ದುದರಿಂದ ಎಷ್ಟೋ ನಟರಿಗೆ, ಮೆಚ್ಚುಗೆಗಳನ್ನು ಕೊಟ್ಟ ಉಲ್ಲೇಖಗಳು ದೊರೆಯುತ್ತವೆ. ಆ ಕಾಲಕ್ಕೆ ನಾಟಕಗೃಹ ವೊಂದಿತ್ತೆಂದು ಡಾ. ಸಾಲೇತೋರರು ಸಿದ್ಧಮಾಡಿದ್ದಾರೆ. ರಂಗದೇವ ರಾಯನು ( ೧೫೨೦ ) ಬೊಂಬೆಯಾಟದವನಿಗೆ ದತ್ತಿಯನ್ನು ಕೊಟ್ಟನೆಂದು ಉಲ್ಲೇಖವಿದೆ.

ರತ್ನಾಕರ ವರ್ಣಿಯು ( ೧೫೫೭ ) ಭರತೇಶ ವೈಭವದಲ್ಲಿ **ಪೂರ್ವ ನಾಟಕಸಂಧಿ, ಉತ್ತರನಾಟಕಸಂಧಿ** ಎಂಬ ಎರಡು ಪ್ರಕರಣಗಳನ್ನೇ ಮಾಡಿದ್ದಾನೆ. ಭರತೇಶನು ತನ್ನ ಸಾಮಂತ ಮೊದಲಾದ ಪರಿವಾರ ದೊಡನೆ ನಾಟ್ಯಶಾಲೆಗೆ ಬಂದು, ನಟರ ನಾಟಕವನ್ನು ನೋಡಿ ಹರುಷಿತ ನಾಗಿ, ನಟರಿಗೆ ಮೆಚ್ಚುಗೆಗಳನ್ನು ಕೊಟ್ಟು ಹೋದ ಸುಂದರವಾದ ವರ್ಣನೆಯನ್ನು ನಾವು ಇಲ್ಲಿ ನೋಡಬಹುದು. ರಂಗಭೂಮಿ, ನಟಿಗಳ ವೇಷಭೂಷಣ, ರೀತಿ-ನೀತಿಗಳನ್ನು ಬಹು ಸೊಗಸಾಗಿ ವರ್ಣಿಸಿದ್ದಾನೆ. ಈ ವರ್ಣನೆ ಓದಿದೊಡನೆಯೇ ಇಂದಿನ ರಂಗಭೂಮಿಯ ಚಿತ್ರವು ಕಣ್ಣೆ ದುರಿಗೆ ನಿಲ್ಲುತ್ತದೆ.

ಭಟ್ಟಾಕಳಂಕನು, ( ೧೬೦೪ ) ತನ್ನಕಾಲದಲ್ಲಿ ನಾಟಕಗಳು ಇದ್ದು ವೆಂದು ಹೇಳುತ್ತಾನೆ. ‘ **ಮಂಜರೀ ಮಕರಂದದಲ್ಲಿ** ’ ಕನ್ನಡಭಾಷೆಯ ಪ್ರೌಢಿಮೆಯನ್ನು ಕೆಳಗಿನಂತೆ ಬಣ್ಣಿಸಿದೆ.

> **“ ನ ಚೈಷಾ ಭಾಷಾಶಾಸ್ತ್ರಾನುಪಯೋಗಿನಿ: ತತ್ವಾರ್ಥ ಮಹಾಶಾಸ್ತ್ರ ವ್ಯಾಖ್ಯಾನಸ್ಯ,ಷಣ್ಣವತಿ ಸಹಸ್ರಪ್ರಮಿತಗ್ರಂಥ ಸಂದರ್ಭರೂಪಸ್ಯ, ಚೂಡಾ ಮಣ್ಯಭಿಧಾನಸ್ಯ, ಮಹಾಶಾಸ್ತ್ರಸ್ಯ, ಅನ್ಯೇಷಾಂ ಚ, ಶಬ್ದಾಗಮ ಯುಕ್ತ್ಯಾಗಮ ಪರಮಾಗಮ ವಿಷಯಣಾಂ ತಥಾ ಕಾವ್ಯನಾಟಕಾಲಂಕಾರ ಕಲಾ ಶಾಸ್ತ್ರವಿಷಯಾಣಾಂ ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಂ ಉಪಲಭ್ಯಮಾನತ್ವಾತ್, ಅತ ಏವ ಮಹಾಜನ ಪರಿಗ್ರಾಹ್ಯಾ, ಏತದ್ ಗ್ರಂಥಕರ್ತೃಣಾಮೇವ ಮಹಾಜನತ್ವಾತ್ ”**

ಗೋವಿಂದ ವೈದ್ಯನು ( ೧೬೪೮ ) ಕಂಠೀರವ ನರಸರಾಜ ವಿಜಯ ದಲ್ಲಿಯೂ **ನಾಟ್ಯಸಾಲೆಯ**ವರ್ಣನೆಯನ್ನು ಬಹು ಮನೋಹರವಾಗಿ ವರ್ಣಿಸುತ್ತಾನೆ. ನಮ್ಮ ನಾಟಕಗಳ ರೀತಿ-ನೀತಿಗಳು ಗೊತ್ತಾಗಬೇ ಕೆಂಬ ದೃಷ್ಟಿಯಿಂದ ಅದನ್ನಿಲ್ಲಿ ಕೊಡಬಯಸುತ್ತೇವೆ. ಶ್ರೀ. ಬೆಟಗೇರಿ

ಇವರು, ತಮ್ಮ 'ಕನ್ನಡಜನಜೀವನ'ದಲ್ಲಿ ಈ ನಾಟ್ಯಶಾಲೆಯ ವರ್ಣನೆಯನ್ನೇ ಈ ರೀತಿಯಾಗಿ ಅವತರಿಸಿದ್ದಾರೆ.

ಕಂಠೀರವ ನರಸರಾಜನು ಪರಿವಾರದೊಡನೆ ನಾಟ್ಯಶಾಲೆಯನ್ನು ಪ್ರವೇಶಿಸಿ ಆಸನದ ಮೇಲೆ ಕುಳಿತ ಬಳಿಕ.

"ತೂರ್ಯತ್ರಯದ ಮಂಗಳಘೋಷವು ಕಿವಿಗಳನ್ನು ಆಕರ್ಷಿಸುತ್ತಿರುವಾಗಲೇ, 'ಭಾಸುರ ಬಿರುದಿನ **ನಾಟ್ಯ**ವಧುಗಳು ಸಂತೋಷದೆ ನಡೆತಂದರು, ಇವರು ತೊಳಗುವ **ನವರತ್ನ ಗಾಸೆ**ಯಿಂದ ಪರಿಶೋಭಿಸುತ್ತಿದ್ದರು; ಸರ್ವಾಂಗಕ್ಕೆ **ಮಣಿಭೂಷಣ** ಅಳವಟ್ಟವರು. ಧಳಧಳಿಸುವ ಮುದ್ದುಮೊಗದ ಚೆನ್ನೆಯರು. ಇವರಿಗೆ ನಾಟ್ಯಾಭಿನಯಗಳನ್ನು ಕಲಿಸಿದ ಭರತಾಚಾರ್ಯನೂ, ನಾಟ್ಯವಧುಗಳ ಗುಂಪಿನಲ್ಲಿದ್ದನು. ಆತನ **'ಉಡಿಯ ಸುತ್ತಿದವಲ್ಲಿ ಪಾಟನ,ಕರದಲಿಪಿಡಿದು ರಂಜಿಪ ರನ್ನ ಸೆಳೆಯ ಬೆಡಗನ್ನು'** ಬಣ್ಣಿಸಲಿಕ್ಕಾಗದಂತಹದು. ನಾಟ್ಯವಧುಗಳೆಲ್ಲ **ಕಾಂಡಪಟ**ದ ಮರೆಯೊಳು, ( ಪರದೆಯಹಿಂದೆ ) ಭರತಶಾಸ್ತ್ರಾಧಿದೇವಿಯರಂತೆ, ರಂಜಿಸತೊಡಗಿದರು. ಆಗ ತಾಳ, ಮದ್ದಳೆ, ಮುಖವೀಣೆ, ಆವುಜ, ಗೀತಾ-ದಳಪ, ನಾಟ್ಯವಧುಗಳ ಕಾಲಗೆಜ್ಜೆಯರವ, ಗತಿ, ಇವೆಲ್ಲ ಕೂಡಿ ಕಿವಿಗೊಂದು ಹೊಸ ಸವಿಯನ್ನು ಬೀರಲು ತೊಡಗಿದುವು. ಮೊದಲು **ಸೂತ್ರಧಾರನು** ಒಂದು, **ತತ್ತಕಾರವ ವಿರಚಿಸಿ ಜವನಿಕೆ ( ಪರದೆ ) ದೆಗೆಯೆ,** ಭರತಶಾಸ್ತ್ರಾಗಮದಂತೆ, ಪೌರ್ರ್ಯಯರು ಪುಷ್ಪಗಳನ್ನು ಸೂಸಿದರು. ಬಳಿಕ ಮಂಗಳಾಚರಣಕ್ಕೆ ಮೊದಲಾಯಿತು. ಇನಿದಾದ ದನಿಯಲ್ಲಿ

"ನರಸಿಂಹಸ್ತುತಿ ಗೀತ-ಪ್ರಬಂಧವ | ಪಿರಿದು ಸುಳಾದಿ ತಾಳದಲಿ |
ಕರದಭಿನಯಗೂಡಿ ಕಡುಕುಶಲದೆ ನಾಟ್ಯ | ದಿರವ ಮೆರೆದರಂಗನೆಯರು"

ಅಲ್ಲದೆ ಅವರು **'ಕರಭೇದ' 'ದೃಷ್ಟಿಭೇದ' 'ಶಿರಭೇದ' 'ಸ್ಥಾನಕಭೇದ' 'ಚಾರಿಯಭೇದ'** ಇವೆಲ್ಲವುಗಳ ಮೂಲಕ ಭಾವವನ್ನು ಪ್ರದರ್ಶಿಸಿದರು. ಆ ನರ್ತಕಿಯರಿಗೆ, ನಾಟ್ಯಭೇದಗಳಾದ **'ಅಂಗ. ಪ್ರತ್ಯಂಗೋಪಾಂಗ ಬಹುಚಾಳಿ, ವರದೇಶಿ, ಕೋಲಚಾರಿ, ಅಂಗಹಾರ, ಮಂಡಲ, ಕರಕ್ಷೇತ್ರ'** ಎಂಬುವೆಲ್ಲ ಚನ್ನಾಗಿ ಗೊತ್ತಿದ್ದುವು. **'ರಂಭಾರಿಯ ಪಾತ್ರದ ಪರಿಣತಿಯು......ಊರ್ವಶಿಯ ಮುಂಬರಿದೆಸೆವ ಕಟ್ಟಣೆ**

**ಗಳ ಗತಿಯು'** ಅವರು ಆಡಿತೋರಿಸಿದರು. ಅದರಂತೆಯೇ **'ಪಿರಿದು ಪ್ರಬಂಧ-ಜಕ್ಕಣಿ ರಾಜಕೀರನ ಮೆರೆವ ಕಟ್ಟಳೆಯಾಟಗಳ,** ಪ್ರದರ್ಶನಮಾಡಿದರು. ಆಗ ಅವರ ಪಾತ್ರಕ್ಕೆ ಮೆಚ್ಚಿ, **ಪಾರ್ವತಿ, ಶಚಿ, ಶಾರದೆ** ಮೊದಲಾದವರು ಹೂಮಳೆಗರೆದರೇನೊ ಎಂಬಂತೆ, ಅಲ್ಲಿ ಕೃತ್ರಿಮವಾಗಿ ರಚಿಸಿದ **ಸೂತ್ರಾಭ್ರ** (ಅಭ್ರ–ಮೋಡ) ಗಳಿಂದ ಪರಿಮಳ ಪುಷ್ಪಗಳು ಸೂಸಿದವು. ನಾಟ್ಯವನ್ನು ನೋಡಿ ನಲಿವ ನರಸರಾಜನು 'ಭರತಜ್ಞ-ಮೇಳಗಾರರಿಗೆ' ನಾಟ್ಯವಧುಗಳಿಗೆ 'ಸುರಚಿರವಸನ' ಕರ್ಪೂರದ ಪರಿಮಳ ಮೆರೆವ ವೀಳೆಯಗಳನು ಇತ್ತು ಮನ್ನಿಸಿದ." ಈ ವರ್ಣನೆಯು ನಮ್ಮ ಜನಾಂಗದ ನಾಟ್ಯಕಲೆಯ ಪರಿಪೂರ್ಣತೆಯನ್ನು ವರ್ಣಿಸುತ್ತದೆ.

೧೬೮೦ರಲ್ಲಿಯಂತೂ ಸಿಂಗರಾರ್ಯರ ನಾಟಕವೇ ದೊರೆಯುತ್ತದೆ. ಅದೆ 'ಮಿತ್ರವಿಂದಾಗೋವಿಂದ'ವೆಂಬ ನಾಟಕವು. ಇದು ರತ್ನಾವಳೀ ಎಂಬ ಸಂಸ್ಕೃತ ನಾಟಕದ ಭಾಷಾಂತರವು.

ಈಗಿನ ನಮ್ಮ ಜನಪದದಲ್ಲಿ ದೊಡ್ಡಾಟ, ಬೈಲಾಟಗಳು ಕಾಣುತ್ತವೆ. ಇವೇ ನಮ್ಮ ನಾಟಕಗಳಾಗಿರಬೇಕು. ಭರತನ ನಾಟ್ಯಶಾಸ್ತ್ರವನ್ನರಿತ, ಕನ್ನಡಿಗರ ಬೆಳವಣಿಗೆಯು ಈ ದಿಶೆಯಲ್ಲಿ ಆಗಲಿಲ್ಲವೆಂಬ ಮಾತನ್ನು ನಮ್ಮ ಸಾಹಿತ್ಯವು ಅಲ್ಲಗಳೆಯುತ್ತದೆಂಬುದು ಮೇಲಿನ ವರ್ಣನೆಗಳಿಂದ ಸ್ಪಷ್ಟವಾಗುತ್ತದೆ.

ನಮ್ಮ ಶಿಲ್ಪಕಲೆಯೂ ನಮ್ಮಮಾತಿಗೆ ಸಾಕ್ಷಿಯನ್ನು ಕೊಡುತ್ತದೆ. ನಮ್ಮ ಶಿಲ್ಪದಲ್ಲಿ ಕಾಣುವ, ಭಾವ ಭಂಗಿಗಳು ಇನ್ನೂ ನಮ್ಮ ದೊಡ್ಡಾಟದಲ್ಲಿ ನೋಡಲು ಸಿಗುತ್ತವೆ. ಈ ಭಂಗಿಗಳು ಜೀವನದಲ್ಲಿರದೆ ಶಿಲ್ಪದಲ್ಲಿ ಮೂಡಬಹುದೇ! ಭರತನ ನಾಟ್ಯಶಾಸ್ತ್ರಕ್ಕೂ ಕನ್ನಡಿಗರ ನೃತ್ಯವೇ ಆಧಾರವಾಗಿರಬೇಕೆಂದು ನಮಗೆ ಅನಿಸುತ್ತದೆ. ಈ ಪ್ರಶ್ನೆಯನ್ನು ವಿದ್ವಾಂಸರಿಗೆ ಬಿಟ್ಟುಬಿಡುತ್ತೇವೆ.

ಇಷ್ಟೆಲ್ಲ ಸಂಗತಿಗಳು ಕನ್ನಡಿಗರ **ನಾಟ್ಯಮಯ ಜೀವನವನ್ನು** ಹೇಳುತ್ತಿದ್ದರೂ, ಕನ್ನಡಿಗರೇ ಸಂಸ್ಕೃತ ನಾಟಕಗಳನ್ನು ಬರೆದಿದ್ದರೂ, ಕನ್ನಡ ನಾಟಕಗಳೇಕಿಲ್ಲವೆಂಬ ಪ್ರಶ್ನೆಯು ಹಾಗೆಯೇ ಉಳಿಯುತ್ತದೆ.

ಮತಪ್ರಚಾರಕ ದೃಷ್ಟಿಯು ಈ ಕಡೆಗೆ ನಮ್ಮ ಕವಿಗಳ ಲಕ್ಷ್ಯ ವನ್ನು ಎಳೆದಂತೆ ತೋರುವದಿಲ್ಲ. ವೀರಶೈವರಿಗಂತೂ ಆ ಕಾಲಕ್ಕೆ ಮತ ಪ್ರಚಾರವನ್ನು ಮಾಡುವದೇ ಬಹುಮುಖ್ಯ ಕಾರ್ಯವಾಗಿತ್ತು. ಜೈನರೂ, ಮತಪ್ರಚಾರಕ್ಕಾಗಿಯೇ ಕನ್ನಡದಲ್ಲಿ ಬರೆಯಲು ಪ್ರಾರಂಭ ಸಿದುದು. ಆದರೆ ಈ ಕಾರಣವು ನಮಗೆ ಸಬಲವಾಗಿ ಕಾಣಲೊಲ್ಲದು.

ರಾಜಾಂಗಣದಲ್ಲಿ ಸಂಸ್ಕೃತನಾಟಕಗಳು, ನಡೆಯುತ್ತಿದ್ದವೆಂಬ ಮಾತು ನಮ್ಮ ಮೇಲಿನ ತರ್ಕಸರಣಿಗೆ ವಿರೋಧವಾಗಿದೆ. ಕನ್ನಡದಲ್ಲಿ ಬರೆಯುವ ಆವಶ್ಯಕತೆಯೇ ತೋರಿರಲಿಕ್ಕಿಲ್ಲವೇ ? ಈ ದೃಷ್ಟಿಯಿಂದ ನೋಡಿದರೆ ಒಂದು ಕಲ್ಪನೆಯು ಮನಸ್ಸಿಗೆ ಸಮಾಧಾನವಾಗಿ ಒಡಮೂಡುವದು.

ನಮ್ಮ ನಟರು ಕಾವ್ಯಗಳನ್ನೇ ನಾಟಕ ರೂಪವಾಗಿ ಉಪಯೋಗಿ ಸಿರಬೇಕು. ಯಾಕೆಂದರೆ, ಇಂದಿಗೂ ಹಳ್ಳಿಗಳಲ್ಲಿ ಭಾಗವತನು ತನ್ನ ಮೇಳದೊಂದಿಗೆ, ಕಥೆಗಳನ್ನಾಡುವದನ್ನು ನೋಡಿದರೆ, ನಮ್ಮ ಮಾತಿಗೆ ಅರ್ಥವಾಗುವದು. ಇದರಿಂದ ನಾಟಕಗಳು ಎಂದು ಹೆಸರಿಟ್ಟು ಬರೆಯುವ ಆವಶ್ಯಕತೆ ತೋರದಿರಲು ಸಾಕು. ರಾಜಾಂಗಣದಲ್ಲಿ, ಸಂಸ್ಕೃತ, ಜನ ಜೀವನದಲ್ಲಿ ಕನ್ನಡವಿರಬಹುದು. ಇದೂ ಒಂದು ಊಹೆ. ನಾಟಕಗಳು ಇರಬಹುದು, ದೊರತಿರಲಿಕ್ಕಿಲ್ಲ. ಏನೇ ಆದರೂ ಸಾಹಿತ್ಯದ ದೃಷ್ಟಿ ಯಿಂದ ಇದು ಒಂದು ಕೊರತೆಯೇ ಸರಿ.

— —

# ೬. ವಚನ ಸಾಹಿತ್ಯ

೧೨ ನೇ ಶತಮಾನವು ಕನ್ನಡ ಸಾಹಿತ್ಯದ ಸ್ವಾತಂತ್ರ್ಯದ ಯುಗವೆಂದು ಹಿಂದೆಯೇ ಹೇಳಿದ್ದೇವೆ. ಶ್ರೀ ಬಸವೇಶ್ವರನು ಅವೈದಿಕವಾದ ಜೈನ ಮತದ ವಿರುದ್ಧವಾಗಿಯೂ ವೈದಿಕ ಸನಾತನಿಗಳ ವಿರುದ್ಧವಾಗಿಯೂ ಬಂಡೆಬ್ಬಿಸಿ, ವರ್ಣಗಳ ಸಂಕೋಲೆಗಳನ್ನು ಕಡಿದೊಗೆದು, ಸಮಾಜವನ್ನು ಬಂಧಮುಕ್ತಮಾಡಿದನು. ಅಧ್ಯಾತ್ಮದ ಜಿಜ್ಞಾಸುಗಳೆಲ್ಲರೂ ಒಂದೇ ಎಂದೂ, ಅದಕ್ಕೆ ಜಾತಿ, ಕೋತಿಗಳಿಲ್ಲವೆಂದೂ, ಹೆಣ್ಣು-ಗಂಡುಗಳ ಭೇದವಿಲ್ಲವೆಂದೂ ಸಾರಿ, ಸಮಾಜವನ್ನೇ ಕಲಕು ಮಲಕು ಮಾಡಿಬಿಟ್ಟನು. ವೈದಿಕ ಮುಕ್ತಿಮಾರ್ಗವನ್ನು, ಸರ್ವಮಾನವರಿಗೆ ತೆರೆದುಬಿಟ್ಟನು. ಸಾಮಾಜಿಕ, ಹಾಗು ಧಾರ್ಮಿಕ ಕಟ್ಟು ಕಟ್ಟಳೆಗಳಿಂದ ಹತ್ತಿಕ್ಕಲ್ಪಟ್ಟ ಆತ್ಮಿಕ ಶಕ್ತಿಗೆ ಪುಟಸಿಕ್ಕಂತಾಗಿ ಮುಮುಕ್ಷುಗಳ ತೃಷೆಯು ಭುಗಿಲೆಂದು ಮೇಲಕ್ಕೆ ಬಂದಿತು. ಸ್ತ್ರೀಯರಲ್ಲಿ ಪುರುಷರಲ್ಲಿ ಬ್ರಾಹ್ಮಣರಲ್ಲಿ ಹೊಲೆಯರಲ್ಲಿ ಎಲ್ಲಿನೋಡಿದರೂ ಆತ್ಮಿಕ ಶಕ್ತಿಯ-ಜ್ಞಾನಪಿಪಾಸೆಯ ಬೆಳಕು ಕಾಣಹತ್ತಿತು. ಅಧ್ಯಾತ್ಮವಾದಿಗಳ ಗುಂಪೇ ಕಣ್ಣಿಗೆ ಬೀಳಹತ್ತಿದವು. ಇದಕ್ಕೆ ಕರ್ನಾಟಕದ **ಆಧ್ಯಾತ್ಮಿಕ ಯುಗವೆಂದೇ** ಹೇಳಬಹುದು. ಈ ಸಾಧಕರ, ಶಿವಶರಣರ, ಮುಮುಕ್ಷುಗಳ, ಅನುಭಾವಿಗಳ **ಉಸಿರೇ ವಚನಗಳು.**

ಬಸವೇಶ್ವರರು ತಮ್ಮ ಉಪದೇಶವನ್ನೆಲ್ಲ—ಅನುಭವಗಳನ್ನೆಲ್ಲ ಸಾಮಾನ್ಯ ಜನರ ಬಳಿಕೆಯ ಭಾಷೆಯಲ್ಲಿ ಸುಲಭವಾಗಿ ಲಲಿತವಾಗಿ ಹೇಳತೊಡಗಿದರು. **ಅದೇ ವಚನರೂಪವಾಗಿ** ಹೊರಬಿದ್ದಿತು. ಜನಸಾಮಾನ್ಯರಿಗೆ ತಿಳಿಯಬೇಕೆಂಬ ಈ ದೃಷ್ಟಿಯು ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟುಮಾಡಿತು. ಈ ವಚನಗಳು ಸಾಹಿತ್ಯದಲ್ಲಿ ಹೊಸಮನ್ವಂತರವನ್ನೇ ಪ್ರಾರಂಭಿಸಿದವು.

ಚಂಪೂಕಾವ್ಯಗಳಲ್ಲಿಯ ಗದ್ಯಕ್ಕೆ **ವಚನವೆಂದೇ** ಕರೆಯುತ್ತಿದ್ದರು.

ಬಸವೇಶ್ವರನು ಈ ವಚನಗಳನ್ನೇ ವಿಶಿಷ್ಟರೀತಿಯಿಂದ ಉಪಯೋಗಿಸಿ, ಅವುಗಳಿಗೆ ಜೀವಕಳೆಯನ್ನು ತುಂಬಿ ವಚನಗಳಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟನು. ವಚನ ವಾಙ್ಮಯಕ್ಕೆ ಬಸವ ನಿಂದ ಕಳೆಬಂದುದಾದರೂ ಅವಕ್ಕಿಂತಲೂ ಮೊದಲೇ ಈ ಸಾಹಿತ್ಯಕ್ಕೆ ಪ್ರಾರಂಭವಾಗಿದೆ. **ಜೇಡರ ದಾಸಿಮಯ್ಯ** (೧೦೪೦) **ಸಕಲೇಶಮಾದ ರಸ** (೧೧೫೦) **ಗಣದಾಸಿ ವೀರಣ್ಣ** ಮೊದಲಾದವರು ವಚನದಲ್ಲಿಯೇ ಬರೆಯಲು ಪ್ರಾರಂಭಿಸಿದ್ದರು. ಬಸವ, ಶರಣಬಸವಾದಿಗಳ ಕೈವಾಡದಿಂದ ವಚನಗಳು ಸರ್ವೋತ್ಕೃಷ್ಟವಾದ, ಆಧ್ಯಾತ್ಮಜ್ಞಾನ,ಅನುಭವ, ವೇದೋ ಪನಿಷತ್ತುಗಳ ತತ್ವಜ್ಞಾನಗಳನ್ನು ಹೇಳುವ ಉತ್ತಮ ಸಾಧನಗಳಾಗಿ ಪರಿಣಮಿಸಿದವು. ಸಾಹಿತ್ಯದಲ್ಲಿ ಶ್ರೇಷ್ಠಸ್ಥಾನವನ್ನು ಪಡೆದವು. ಇಂತಹ **ತೇಜಸ್ವಿಯಾದ ವಾಙ್ಮಯವು** ದ್ರಾವಿಡ ಯಾವ ಭಾಷೆಯಲ್ಲಿಯೂ ದೊರೆಯದು. **ವೇದೋಪನಿಷತ್ತುಗಳ ಸಾಮರ್ಥ್ಯ, ಹಾಗು ಗುಣಗಳುಳ್ಳ ದಿವ್ಯವಾಙ್ಮಯವಿದು.** ಬಸವ, ಶರಣುಬಸವ ಅಲ್ಲಮಪ್ರಭು ಮೊದಲಾದ ಶಿವಶರಣರು, ವೀರಶೈವ ಮತದ ಪ್ರಚಾರಕ್ಕಾಗಿ, ಅನುಭವ ಗಳನ್ನು ಹೇಳುವದಕ್ಕಾಗಿ, ವಚನಗಳನ್ನು ಉಪಯೋಗಿಸಿದ್ದರಿಂದ ಇವು **ವಚನಶಾಸ್ತ್ರವೆಂಬ** ರೂಪವನ್ನೇ ತಾಳಿದವು.

ವೀರಶೈವ ಮತದ ತತ್ವಗಳನ್ನೂ ವೀರಶೈವ ಧರ್ಮಾಚಾರಗಳನ್ನೂ ಹೇಳುವುದೇ ಈ ವಚನಗಳ ಉದ್ದೇಶವು. ವೇದಾಗಮಗಳಲ್ಲಿ ಹೇಳಲ್ಪಟ್ಟ ತತ್ವಗಳನ್ನು ಸುಲಭವಾಗಿ ಅನುಭವ ಪೂರ್ಣವಾಗಿ ಶಿವಶರಣರು ಹೇಳಿದ್ದಾರೆ. ಅನನ್ಯಭಕ್ತರಾದ ಶಿವಶರಣರು ಮೋಕ್ಷವನ್ನು ತಮ್ಮ ಗುರಿಯನ್ನಾಗಿ ಇಟ್ಟುಕೊಂಡು ಹೇಳಿದ **ಅಧ್ಯಾತ್ಮಶಾಸ್ತ್ರವಿದು.**

ಅಧ್ಯಾತ್ಮವನ್ನೇ ಧ್ಯೇಯವಾಗಿಟ್ಟುಕೊಂಡ ಈ ವಚನಗಳಲ್ಲಿ ಎರಡು ರೀತಿಯ ವಚನಗಳು ಕಣ್ಣಿಗೆ ಬೀಳುತ್ತವೆ ಒಂದು ತತ್ವಗಳ ವಿಚಾರ, ಇನ್ನೊಂದು ವೀರಶೈವ ಮತಕ್ಕೆ ವಿಶಿಷ್ಟವಾದ ಶಕ್ತಿವಿಶಿಷ್ಟಾ-ದ್ವೈತ, ಷಟಸ್ಥಳ, ಅಂಗ ಲಿಂಗ ಸಂಬಂಧ, ಲಿಂಗಧಾರಣಾದಿ ವೀರಶೈವಾಚಾರ, ಅಷ್ಟಾವರಣ, ಮತ್ತು ಪಂಚಾಚಾರ ಮುಂತಾದ ಮತದ ವಿಚಾರಗಳು

ಅವರ ಸಂಪ್ರದಾಯದ ರೀತಿಯಲ್ಲಿ ನೋಡಿದರೆ, ಶಿವೈಕ್ಯ–ಲಿಂಗೈಕ್ಯವೇ, ಗುರಿಯು. ಶಿವನೇ ಲಿಂಗನು. ಜೀವವೇ ಅಂಗ. ಸಾಧಕರಲ್ಲಿ ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಸ್ಥಲ, ಪ್ರಾಣಲಿಂಗಸ್ಥಲ, ಶರಣಸ್ಥಲ, ಮತ್ತು ಐಕ್ಯಸ್ಥಲವೆಂದು **ಷಟ್‌ಸ್ಥಲಗಳು**. ಲಿಂಗಾಂಗ ಸಾಮರಸ್ಯವು ಉಂಟಾಗಲಿಕ್ಕೆ, ಗುರುಲಿಂಗ, ಜಂಗಮಪೂಜೆ, ಪಾದೋದಕ, ಪ್ರಸಾದಗ್ರಹಣ, ವಿಭೂತಿ, ರುದ್ರಾಕ್ಷಿಧಾರಣ, ಮತ್ತು ಷಡಕ್ಷರ ಮಂತ್ರ, ವೆಂಬ **ಅಷ್ಟಾವರಣ ಮಾರ್ಗವು** ಹೇಳಲ್ಪಟ್ಟಿದೆ. ಇದರಂತೆಯೇ ಸದಾಚಾರ, ಗಣಾಚಾರ, ನಿತ್ಯಾಚಾರ, ಶಿವಾಚಾರ, ಮತ್ತು ಲಿಂಗಾಚಾರಗಳೆಂದು **ಪಂಚಾಚಾರಗಳು** ಈ ವಚನಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ.

ತಾತ್ವಿಕ ದೃಷ್ಟಿಯಿಂದ ನೋಡಿದರೆ, ಮಾನವನು ಜ್ಞಾನವಂತನಾಗಿ ಲಿಂಗಾಂಗ ಸಾಮರಸ್ಯ (ಶಿವೈಕ್ಯ) ವನ್ನು ಹೊಂದುವ ವರೆಗಿನ ಎಲ್ಲ ತತ್ವಗಳ ವಿವೇಚನೆಯು ಈ ವಚನಗಳಲ್ಲಿ ಕಂಡು ಬರುವದು.

> **ಪರವಸ್ತುವಿನ ( ಪರಮಾತ್ಮನ ) ಸ್ವರೂಪ, ಸೃಷ್ಟಿ, ಸೃಷ್ಟಿರಚನೆಯ ಕ್ರಮ, ಪರಮಾತ್ಮನ ಅಸ್ತಿತ್ವ, ಮುಕ್ತಿಯೇ ಮಾನವನ ಧ್ಯೇಯ, ಸಾಕ್ಷಾತ್ಕಾರ, ಸಾಕ್ಷಾತ್ಕಾರಿಯ ನಿಲವು, ಅಜ್ಞಾನ, ಮುಕ್ತಿಯುಬಯಕೆ, ಸರ್ವಾರ್ಪಣ, ಜ್ಞಾನಯೋಗ, ಭಕ್ತಿಯೋಗ ಕರ್ಮಯೋಗ, ಧ್ಯಾನಯೋಗ, ಜ್ಞಾನ-ಭಕ್ತಿ-ಕ್ರಿಯಾ-ಧ್ಯಾನಗಳ ಸಂಬಂಧ, ಸಾಧಕನಿಗೆ ಅವಶ್ಯವಿದ್ದ ಗುಣ, ಶೀಲ ಕರ್ಮಗಳು, ವಿಧಿನಿಷೇಧಗಳು, ವರ್ಣಿಸಲ್ಪಟ್ಟಿವೆ. ಅಂತು ಶಿವಸರ್ವೋತ್ತಮತ್ವ, ಶಿವಾದ್ವೈತಗಳೇ ಈ ವಚನಗಳ ಗುರಿಯು ಅದನ್ನು ಪ್ರತಿಪಾದಿಸಿದೆ.**

ಈ ವಚನ ವಾಙ್ಮಯಕ್ಕೆ ವೇದೋಪನಿಷತ್ತುಗಳಿಂದ, ವಿಶೇಷವಾಗಿ ಶೈವಾಗಮಗಳಿಂದಲೇ ವಿಷಯವನ್ನೆತ್ತಿದ್ದಾರೆ.

ಶಿವಸರ್ವೋತ್ತಮತ್ವವನ್ನು ಪ್ರತಿಪಾದಿಸುವದೇ ಶೈವಾಗಮಗಳ ಧ್ಯೇಯ, ಇವು ೨೮ ಇರುವವು. ಇವು ವೇದಗಳಂತೆ ಅಪೌರುಷೇಯವೆಂದು ಶೈವರ ನಂಬುಗೆ, ಇವಲ್ಲದೆ ಉಪಾಗಮಗಳೂ ಇವೆ. ' ಇಪ್ಪತ್ತೆಂಟು ದಿವ್ಯಾಗಮಗಳು, ಎಂದು ಗಣದಾಸೀ ವೀರಣ್ಣನು ಉಲ್ಲೇಖಿಸುತ್ತಾನೆ. ಜೀವನು ಅಷ್ಟಾವರಣದ ಸಾಧನಗಳಿಂದ, ಪಂಚಾಚಾರಗಳಿಂದ ಷಟ್‌ಸ್ಥಲಗಳಾಚರಣೆಯಿಂದ, ಇಷ್ಟಲಿಂಗ ಪೂಜೆಯಿಂದ, ಸರ್ವಾ

ರ್ಪಣದಿಂದ ಶಿವಾದ್ವೈತವನ್ನು ಸಾಧಿಸಬೇಕೆಂದು ಈ ಆಗಮುಗಳು ಹೇಳುತ್ತವೆ. **ಕನ್ನಡ ವಚನ ಆಗಮುಗಳೂ** ( ವಚನಗಳೂ ) ಇವನ್ನೇ ಹೇಳುತ್ತವೆ. ಇದಲ್ಲದೆ, ಪುರಾತನರ ವಚನಗಳೂ ಇವರಿಗೆ ಆಧಾರ ವಾಗಿವೆ.

" ಆದ್ಯರವಚನ ಪರುಷಕಂಡಯ್ಯಾ, ಅವರು ಶೃತಿಯ ತೋರಿ ನುಡಿದರು, ' ದೃಷ್ಟವ ತೋರಿ ನಡೆವರು, ಶ್ರುತಿ-ಸ್ಮೃತ್ಯಾದಿಗಳೆಲ್ಲ ಮಾಯವಾದರೂ ಇಷ್ಟವಾದ ಪುರಾತನರ ನುಡಿಗಳುಳಿದರೆ ಸಾಕು. ಯಾಕೆಂದರೆ ಪರಮಾತ್ಮನ ಜ್ಞಾನವಾಗಲು ಆದ್ಯರವಚನ ಬಹು ವೇದ್ಯಾ ವಯ್ಯಾ " ಎಂದು ಮುಂತಾಗಿ ವಚನಕಾರರು ಹೇಳುತ್ತಾರೆ.

ಈ ವಚನ ಯುಗವು ೧೨ ನೇ ಶತಮಾನದಿಂದ ಪ್ರಾರಂಭವಾಯಿತು. ಆದರೂ ಈ ಶತಮಾನದ ಉತ್ತರಾರ್ಧದಿಂದ ೧೩ ನೇ ಶತಮಾನದವರೆಗೆ ವಚನಕ್ಕೆ ಉರ್ಜಿತ ಕಾಲ. ಈ ೫೦ ವರ್ಷಗಳಲ್ಲಿ ಆಗಿಹೋದ ವಚನಕಾರರಷ್ಟು ಮುಂದೆ ಯಾವ ಕಾಲದಲ್ಲಿಯೂ ಆಗಲಿಲ್ಲ ಭೀಮ ಕವಿಯ ಕಾಲಕ್ಕೆ ( ೧೩೬೯ ) ವಚನಗಳು ತಮ್ಮ ಸಾಹಿತ್ಯದಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡವು. ಮುಂದೆ ತೋಂಟದ ಶಿದ್ಧಲಿಂಗ ಯತಿಗಳ ಕಾಲಕ್ಕ ( ೧೪೭೦ ) ಮತ್ತೆ ವಚನಗಳು ತಲೆಯುತ್ತಿದವಾದರೂ ಮೊದಲಿನಷ್ಟು ವಿಪುಲವಾಗಿ ಬೆಳೆದಂತೆ ಕಾಣುವದಿಲ್ಲ. ಸಂಗೀತದ ಬೆರೆಕೆಯಿಂದ ಈ ವಚನಗಳು, ತ್ರಿಪದಿ, ಸಾಂಗತ್ಯ, ಷಟ್ಪದಿಗಳ ರೂಪಗಳನ್ನು ತಾಳಿದುವು.

ಈ ವಚನಕಾರರನ್ನು ಲಕ್ಷಣಗಳ ಮೇಲಿಂದ, ಬಸವೇಶ್ವರ, ಚೆನ್ನ ಬಸವೇಶ್ವರ, ಅಲ್ಲಮಪ್ರಭು, ಅಂಬಿಗರ ಚೌಡಯ್ಯ ಹಾಗು ಸಿದ್ಧಲಿಂಗ ಯತಿ ಈ ಐವರ ವಚನಗಳ ಮೇರೆಗೆ ವಿಭಾಗಿಸಬಹುದು **ಬಸವೇಶ್ವರನ** ವಚನಗಳಲ್ಲಿ ಅವನ ನಿಷ್ಕಪಟಭಾವವೂ ಉದಾರಬುದ್ಧಿ, ಭಕ್ತಿ ಅಂತರಂಗ ಸ್ಫೂರ್ತಿಯಾದ ಗುಣ ಇವೇ ಮೊದಲಾದ ಲಕ್ಷಣಗಳು ಎದ್ದು ಕಾಣುತ್ತವೆ. ಈ ಲಕ್ಷಣಗಳುಳ್ಳ ವಚನಗಳನ್ನೆಲ್ಲ ಬಸವೇಶ್ವರರ ವರ್ಗದಲ್ಲಿ ಸೇರಿಸ ಬಹುದು.

**ಚೆನ್ನಬಸವೇಶ್ವರರು,** ಚಿತ್ಕಳೆಯ ಅವತಾರಿಯೆಂದೂ ಮಹಾ

ಜ್ಞಾನಿಯೆಂದೂ, ಪ್ರಸಿದ್ಧಿಯಿದೆ. ಅದಕ್ಕೆ ತಕ್ಕಂತೆಯೇ ಇವರ ವಚನಗಳಲ್ಲಿ ಜ್ಞಾನದ ತೇಜವು ಕಂಡುಬರುವದು. ಶುದ್ಧ, ನಿರ್ಮಲವಾದ ಸಂಶಯಾತೀತವಾದ ಸ್ಪಷ್ಟವಾದ ಜ್ಞಾನದ ದಿವ್ಯ ಜ್ಯೋತಿಯನ್ನು ಈ ವಚನಗಳಲ್ಲಿ ನಾವು ಕಾಣಬಹುದು. ಈ ಬಗೆಯ ವಚನಗಳನ್ನೆಲ್ಲ ನಾವು ಚೆನ್ನಬಸವೇಶ್ವರರ ವರ್ಗದಲ್ಲಿ ಸೇರಿಸುತ್ತೇವೆ.

ವೀರಶೈವರಲ್ಲಿ **ಅಲ್ಲಮಪ್ರಭುಗಳಿಗೆ,** ಅಗ್ರಸ್ಥಾನವಿದೆ. ಕಪಟ, ಮೋಸಗಳುಳ್ಳ ಜಂಗಮರ ಲೋಪ ದೋಷಗಳನ್ನು ಇವರು ಸಹಿಸುವದಿಲ್ಲ. ಶೂನ್ಯಸಿಂಹಾಸನಾಧಿಪತಿಗಳಾಗಿದ್ದ ವೈರಾಗ್ಯನಿಧಿಯಾಗಿದ್ದ ಇವರ ವಚನಗಳಲ್ಲಿಯು ವೀರವೈರಾಗ್ಯವೂ ಆಧ್ಯಾತ್ಮಿಕ ಅನುಭವಗಳೂ ಹೆಚ್ಚಾಗಿವೆ. ಕೆಲವು ವಿಷಯಗಳು ಸಾಮಾನ್ಯರ ಬುದ್ಧಿಗೆ ನಿಲುಕದಂತವು. ಇಂಥ ವಚನಗಳನ್ನೆಲ್ಲ ಅಲ್ಲಮಪ್ರಭುಗಳ ವರ್ಗದಲ್ಲಿ ಸೇರಿಸಬಹುದು.

ನಾಲ್ಕನೆಯ ವರ್ಗವೆಂದರೆ, ಅಂಬಿಗರ ಚೌಡಯ್ಯನದು. ಈತನ ವಚನಗಳಲ್ಲಿ ದಯಾದಾಕ್ಷಿಣ್ಯಗಳಿಲ್ಲ, ಮೋಸ, ಆಡಂಬರಗಳನ್ನು, ಬೈಲಿಗೆಳೆಯುವದರಲ್ಲಿ ಇವನು ನಿಪುಣನು. ಈ ರೀತಿಯ ವಚನಗಳನ್ನೆಲ್ಲ ಚೌಡಯ್ಯನ ವಚನದ ರೀತಿಯಲ್ಲಿ ವರ್ಣಿಸಬಹುದು.

ಒಟ್ಟು ವಚನಕಾರರೆಲ್ಲ ಈ ನಾಲ್ಕು ವರ್ಗಗಳಲ್ಲಿ ಯಾವುದೊಂದು ವರ್ಗದಲ್ಲಿ ಬರುತ್ತಾರೆ. ವಚನಕಾರರ ಸಂಖ್ಯೆಯೂ ವಚನಗಳ ಸಂಖ್ಯೆಯೂ ವಿಪುಲವಾಗಿದೆ. ವಚನಶಾಸ್ತ್ರದ ವಿಸ್ತಾರವು ಇಂತ್ತಿಷ್ಟೇ ಎಂದು ವಚನಿಸಲು ಬರುವದಿಲ್ಲ. ಸಿದ್ಧರಾಮಯ್ಯನು ಒಂದು ವಚನದಲ್ಲಿ ಅಲ್ಲಯ್ಯನ ಮತ್ತು ಇನ್ನೆಂಟು ಜನರ ವಚನಗಳು ಕೂಡಿ ೧೬೫೧೧೫೦೫೦೦ ಇರುವವು ಎಂದು ಹೇಳಿದ್ದಾನೆ. ಈ ವಚನಗಳು ಕೋಟ್ಯಾನು ಕೋಟಿ ಇರುವವೆಂದು ವೀರಶೈವರ ನಂಬುಗೆಯಿದೆ. ಇದರ ಅರ್ಥವಿಷ್ಟೆ ! ವಚನಗಳು ವಿಪುಲವಾಗಿವೆ. ಈ ವರೆಗೆ, ೨೧೫ ಜನ ವಚನಕಾರರ ವಚನಗಳ ಶೋಧವಾಗಿದೆ. ಇವರಲ್ಲಿ ಸುಪ್ರಸಿದ್ಧ ವಚನಕಾರರು ಹದಿಮೂರು ಜನರು ಮಾತ್ರ, ಉಳಿದವರೆಲ್ಲರೂ ಒಂದಿಲ್ಲೊಂದು ಬಗೆಯಿಂದ ಇವರನ್ನೇ ಅನುಸರಿಸಿದ್ದಾರೆ.

ಬಸವ, ಚೆನ್ನಬಸವ, ಅಲ್ಲಮಪ್ರಭು, ಮಡಿವಾಳಮಾಚಯ್ಯ, ಕೊಂಡಗುಳಿ ಕೇಶಿರಾಜ, ಸಿದ್ಧರಾಮ, ಅಂಬಿಗರಚೌಡಯ್ಯ, ಸೊಡ್ಡಳರ ಚಾಚರಸ, ಮಹಾದೇವಿಯಕ್ಕ, ಮಹಾದೇವಿ, ಬಿಜ್ಜಳದೇವಿ, ಮತ್ತು ಕಾಳವ್ವ ಇವರೇ ಹೆಸರಾದವರು. ವಚನಶಾಸ್ತ್ರ ನಿರ್ಮಾಣಕರು. ಅನುಭಾವಿಗಳು.

## ವಚನದ ಸಾಹಿತ್ಯ ಸ್ವರೂಪ.

ವಚನಗಳು ಕೇವಲ ನೀರಸವಾದ, ತರ್ಕಗಳ ಹೆಬ್ಬೊತ್ತಿಗೆಯೆಂದು ಯಾರೂ ತಿಳಿಯಕೂಡದು. ಭಕ್ತಿಯ ಭಾವಾವೇಶದಿಂದ, ತಲ್ಲಿನರಾದ ಶಿವಶರಣರ ಹೃದಯದಿಂದ ಹೊರಹೊರಟ ಈ ವಚನಗಳು ಕಾವ್ಯಮಯವಾಗಿವೆ. ಅಂತರಂಗದ ಶುದ್ಧಿಗಾಗಿ ಕವಿಹೃದಯವು ಕಾತುರಗೊಂಡಾಗ ಹೊರಹೊಮ್ಮಿದ ದಿವ್ಯ ಸ್ಫೂರ್ತಿಯ ಕಾವ್ಯಗಳಿವು. ಸಣ್ಣ ಸಣ್ಣ ವಾಕ್ಯಗಳಲ್ಲಿ ವಿಪುಲಾರ್ಥವನ್ನು ತುಂಬುವ ಅವರ ರೀತಿ, ಬಾಣದಂತೆ, ನೆರವಾಗಿ ಹೃದಯಕ್ಕೆ ಬಂದು ತಗಲುವ ಅವರ ಸರಣಿ, ತಿಳಿಯಾದ ದೇಶಿಗನ್ನಡದ ಬೆಡಗು, ಮೋಹಕವಾಗಿವೆ. ಸುಂದರವಾದ ಸಾಹಿತ್ಯದ ಲಕ್ಷಣಗಳಿಂದ ಒಡಗೂಡಿವೆ. ಈ ಕನ್ನಡ ಸಾಹಿತ್ಯದಲ್ಲಿ ಇಲ್ಲಿಯವರೆಗೆ, ವ್ಯಕ್ತಿಯ ವ್ಯಕ್ತಿತ್ವವನ್ನು ಕನ್ನಡಿಯಂತೆ, ತೋರುವ ಸಾಹಿತ್ಯವಿರಲಿಲ್ಲ. ವಚನಗಳು ಅವರವರ ಮನಸ್ಸಿನ ಚಿತ್ರಗಳನ್ನು ಅತ್ಯಂತ ಮನೋಹರವಾಗಿ ಚಿತ್ರಿಸಿವೆ. ಇದು ಈ ಸಾಹಿತ್ಯದ ವೈಶಿಷ್ಟ್ಯವೆಂದೇ ಹೇಳಬೇಕು.

ಕಾವ್ಯವು ಕವಿಯ ದಿವ್ಯದರ್ಶನದ-ಅನುಭವದ ವಾಣಿಯಾಗಿರಬೇಕೆಂಬ ಮಾತು ವಚನಗಳಿಗೆ ಪೂರ್ಣವಾಗಿ ಅನ್ವಯಿಸುತ್ತದೆ. ಚೆನ್ನಬಸವನ ಜ್ಞಾನ, ಬಸವೇಶ್ವರನ ಭಕ್ತಿಯ ಉತ್ಕಟತೆ, ಪ್ರಭುದೇವರ ವೈರಾಗ್ಯಭಾವ, ಚೌಡಯ್ಯನ ಕಟುವಿಡಂಬನೆಗಳ ವರ್ಣನೆಗಳು ರೋಮಾಂಚಕಾರಿಯಾಗಿವೆ, ಉಪದೇಶಮಾಡುವರೀತಿ, ವರ್ಣನೆ, ಅಸಂಧಿಗ್ಧವಾಗಿ ಹೇಳುವ ಸರಣಿ, ಅಲಂಕಾರಗಳು, ಶಬ್ದಗಳ ಜೋಡಣೆ,ಹಾಗು ಔಚಿತ್ಯಗಳು ವರ್ಣನಾತೀತವಾಗಿವೆ. ಅಲ್ಲಲ್ಲಿ ಉಪಯೋಗಿಸಲ್ಪಟ್ಟ

ಜಾನಪದದ ನಾಡ್ನುಡಿಗಳು ಕಾವ್ಯಕ್ಕೆ ಕಾಂತಿಯನ್ನುಂಟು ಮಾಡಿವೆ. ಉಪಮೆಗಳು ಒಮ್ಮೆಲೆ, ಚಿತ್ತವನ್ನು ಆಕರ್ಷಿಸುತ್ತವೆ.

ಈ ವಚನಗಳಿಗೆ ಕಾವ್ಯದ ಕಟ್ಟು ಯಾವುದೇ ಇರದಿದ್ದರೂ ತಾನೇ ತಾನಾಗಿ ಸ್ವಾಭಾವಿಕವಾಗಿ ಕಾಣಿಸಿಕೊಂಡ ಅನುಪ್ರಾಸವುಳ್ಳ, ಗತಿ ಬದ್ಧವಾದ ಕಾವ್ಯವನ್ನು ಕಾಣಬಹುದಾಗಿದೆ. ಅನೇಕ ವಚನಗಳನ್ನು ಏಕನಾದದ ಶ್ರುತಿಯೊಂದಿಗೆ ಹಾಡುವ ವಾಡಿಕೆಯುಂಟು, ಒಟ್ಟಿನಲ್ಲಿ ವಚನವಾಙ್ಮಯವು ಸಾಹಿತ್ಯದ ಲಕ್ಷಣಗಳಿಂದ, ತನ್ನ ವಿಶಿಷ್ಟವಾದ ರೀತಿ ಯಿಂದ, ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಈ ವಚನಗಳ ಬೆಡಗನ್ನು ವಚನಿಸಲು ಅಸಾಧ್ಯ. ಹಾಡಿಯೇ ಆನಂದಪಡ ಬೇಕು

## ಕಿರಿದರೋಳ್ ಪಿರಿದರ್ಥಮಂ ಪೇಳ್ವವಚನಗಳು.

**ಆಸೆಯೇ ದಾಸತ್ವ, ನಿರಾಸೆಯೇ ಈಶತ್ವ. ಹಸಿವಿಂಗೆ ಲಯವಿಲ್ಲ, ವಿಷ ಯಕ್ಕೆ ಕುಲವಿಲ್ಲ. ತನ್ನತಾನರಿದಡೆ ತನ್ನರಿವೆಗುರು. ಆತ್ಮನಿಶ್ಚಯವಾದ ಲ್ಲಿಯೇ ಕೈವಲ್ಯ. ತತ್ವನರಿದಲ್ಲಿಯೇ ಒಳಗು.**

ಈವಾಕ್ಯಗಳಲ್ಲಿಯ ಸೊಬಗುನೋಡಿ. ಇಂತಹ ಸೂತ್ರವಚನ ಗಳನ್ನು ನಾವು ಅನೇಕ ಕಾಣಬಹುದು.

## ವರ್ಣನೆಗಳು.

ವರ್ಣನಾಕುಶಲರು ನಮ್ಮ ವಚನಕಾರರು. ಪರಮಾತ್ಮನ ವಿಶ್ವ ರೂಪದ ವರ್ಣನೆಯನ್ನು ನೋಡಿ.

**‹‹ ಪಾತಾಳದಿಂ ಕೆಳಗೆ ಪಾದ, ಸುವರ್ಲೋಕದಿಂದ ಮೇಲೆ ಉತ್ತಮಾಂಗ ಬ್ರಹ್ಮಾಂಡವೇ ಮುಕುಟ, ಗಗನವೇ ಮುಖ. ಚಂದ್ರಾರ್ಕಾಗ್ನಿಗಳೇ ನೇತ್ರ. ದಶದಿಕ್ಕುಗಳೇ ಬಾಹುಗಳು. ಮಹದಾಕಾಶವೇ ಶರೀರ............**

ಇಂತಹ ಮನೋಹರವಾದ ವರ್ಣನೆಗಳು ಅನೇಕವಿವೆ. ಅದರೂ ವರ್ಣ ನಾತ್ಮಕ ವಚನಗಳು, ಕಡಿಮೆ.

## ಉಪದೇಶದರೀತಿ.

ಉಪದೇಶ ಮಾಡುವ ರೀತಿಯು ಬಹು ಸೊಗಸಾಗಿದೆ. ಉಪದೇಶವು ನಾಟಿ, ಜ್ಞಾನದ ಬೆಳಕು ಬೀಳುವ ಹಾಗೆ ಮಾಡುವ ರೀತಿಯಿದು.

“ ಅಷ್ಟಾಷಷ್ಟಿಕೋಟಿ ತೀರ್ಥವಮಿಂದರಿಲ್ಲ ಕಾಣಿರಣ್ಣಾ. ಲಕ್ಷಕೋಟಿ ಜಪವನೆಣಿಸಿ ಧ್ಯಾನ, ಹೋಮ, ನೇಮ, ಮೌನ, ಜಪಮಾಡಿದರಿಲ್ಲ ಕಾಣಿರಣ್ಣಾ. ನೂರಿಪತ್ತು ವೇಳೆ ಭೂಪ್ರದಕ್ಷಿಣೆ ಮಾಡಿದರಿಲ್ಲ ಕಾಣಿರಣ್ಣಾ ! ಕಾಶಿ, ಕೇದಾರ,ಶ್ರೀಶೈಲ ಶಿವಗಂಗೆ ಹೋದರಿಲ್ಲ ಕಾಣಿರಣ್ಣಾ. ಇವು ಎಲ್ಲವೂ ಬರಿಯಭ್ರಾಂತಿ ಕೇಳಿರಣ್ಣಾ ! ಇಪ್ಪರಾವು ಹೇಳಿಹೆ ಕೇಳಿರಣ್ಣಾ. ಶ್ರೀಗುರು ಕರುಣದಿಂದೆ ಬಿಜಯಂಗೈಸಿಕೊಟ್ಟ ಪರಮಲಿಂಗ ತನ್ನ ಕರದಲ್ಲಿ ತುಂಬಿಪ್ಪುದಯ್ಯ, ಹಲವು ಕಡೆಗೆ ಹೋದ ಮನವ ಧ್ಯಾನವೆಂಬ ಹಸ್ತದಲ್ಲಿ ಹಿಡಿದು ಆ ಲಿಂಗದ ಗೊತ್ತಿನಲ್ಲಿ ಕಟ್ಟ ನೆರೆಯಬಲ್ಲರೆ ಅಲ್ಲಿಪ್ಪನು ಪರಮೇಶ್ವರನು. ಇದೇ ನಿಶ್ಚಯ ಉಳಿದುದೆಲ್ಲ ಹುಸಿಕಂಡೆಯಾ ಮಹಲಿಂಗ ಗುರುಸಿದ್ಧೇಶ್ವರ ಪ್ರಭುವೇ. ”

ನೀರ ಕಂಡಲ್ಲಿ ಮುಳುಗುವರಯ್ಯ ! ಮರನಕಂಡಲ್ಲಿ ಸುತ್ತುವರಯ್ಯ ! ಬತ್ತುವಜಲವ, ಒಣಗುವಮರವ, ನೆಚ್ಚಿದವರು ನಿಮ್ಮನ್ನೆತ್ತಬಲ್ಲರು ಕೂಡಲಸಂಗಮದೇವ !

## ಆರ್ತಹೃದಯ

ಮುಕ್ತಿಯ ಬಯಕೆಯಿಂದ ಹೃದಯವು ಕಾತರಗೊಂಡು ಪ್ರಾರ್ಥಿಸುತ್ತದೆ.

“ ವಿಷಯವೆಂಬ ಹಸುರ ನೆನ್ನಮುಂದೆ ಪಸರಿಸದಿರಯ್ಯ. ಪಶುವೇನಬಲ್ಲದು ಹಸುರೆಂದೆಳೆಸುವದಲ್ಲದೆ ? ವಿಷಯ ರಹಿತನಮಾಡಿ, ಭಕ್ತಿರಸವ ದಣಿಯ ಮೇಯಿಸಿ, ಸುಬುದ್ಧಿ ಎಂಬ ಉದಕವ ನೆರೆದುನೋಡಿ, ಸಲಹಯ್ಯ ಕೂಡಲಸಂಗಮದೇವಾ।

ಕೆಸರಲ್ಲಿ ಬಿದ್ದ ಪಶುವಿನಂತೆ, ದೆಸೆದೆಸೆಗೆ ಬಾಯಿಬಿಡುತ್ತಿದ್ದೇನಯ್ಯ, ಆರೈವರಿಲ್ಲ, ಅಕಟಾ ! ಪಶುವೆಂದೆನ್ನ ಕೂಡಲಸಂಗಮದೇವ ಕೊಂಬುಹಿಡಿದೆತುವನ್ನಕ್ಕರ.

ಎನ್ನಯೋಗ ಕ್ಷೇಮ ನಿಮ್ಮದಯ್ಯ. ಎನ್ನ ಹಾನಿ ವೃದ್ಧಿ ನಿಮ್ಮದಯ್ಯ ! ಎನ

**ಮಾನಾಪಮಾನ ನಿಮ್ಮದಯ್ಯಾ ಬಳ್ಳಿಗೆ ಕಾಯಿ ದಿಮ್ಮಿತ್ತೆ, ಕೂಡಲ ಸಂಗಮದೇವಾ !**

ಈ ವಚನಗಳಲ್ಲಿ ಭಕ್ತಿ, ವೈರಾಗ್ಯ, ಆರ್ತಹೃದಯಗಳನ್ನು ಕಾಣಬಹುದು.

## ಸತಿ-ಪತಿ-ಕೂಟ ( ಆತ್ಮಾನಂದ )

ಪರಮಾತ್ಮನೇ ಪತಿ. ಆತ್ಮನೆ ಸತಿ-ಎಂದು ಬಗೆದು ಸತಿ-ಪತಿಗಳ ಸಂಗವನ್ನೇ ಆತ್ಮಾನಂದಕ್ಕೆ ಹೋಲಿಸಿದ ವಚನಗಳು ಬಹು ಮನೋಹರವಾಗಿವೆ.

**" ಎಲವೋ ಎಲವೋ ನಲ್ಲ. ನಿಮ್ಮ ಕೂಡದ ಮುನ್ನ ನಾಕಾಣೆ, ಕೂಡಿದ ಬಳಿಕ ಮತ್ತೆ ಕಾಣೆನಯ್ಯ ! ಕೂಟದ ಸುಖದಿಂದ ನಾನೀನೆಂದರಿಯೆ ಕಪಿಲಸಿದ್ಧ ಮಲ್ಲಿನಾಥಯ್ಯಾ.**

**ನಲ್ಲನ ಕೂಡುವ ಭರದಲ್ಲಿ ಎನ್ನ ಇದಿರು ಎನೆಂದರಿಯೆ. ನಲ್ಲನಕೂಡುವಾಗಲು ಎನ್ನನಲ್ಲನ ಎನೆಂದರಿಯೆ ಉರಲಿಂಗದೇವನ ಕೂಡಿದ ಬಳಿಕ ನಾನೋ ತಾನೋ ಎನೆಂದರಿಯೆ.**

**ಅಂತರಂಗ, ಬಹಿರಂಗ ಆತ್ಮಸಂಗ ಒಂದೇ ಆಯ್ಯಾ. ಆರೂಢ ಸುಖವನು ಕೂಡಲಸಂಗಮದೇವ ತಾನೇ ಬಲ್ಲನು.**

## ಆತ್ಮನಿರೀಕ್ಷಣೆ.

ಕವಿಯ ಹೃದಯ ಮಂದಿರದಲ್ಲಿರುವ ಅವನ ಮನೋದೇವತೆಯನ್ನು ಚಿತ್ರಿಸುವ ವಚನಗಳು.

**ಹರಿವ ಹಾವಿಗಂಜೆ, ಉರಿಯನಾಲಿಗೆಗಂಜೆ, ಸುರಿಗೆಯಮೊನೆಗಂಜೆ, ಒಂದಕ್ಕಂಜುವೆ, ಒಂದಕ್ಕಳುಕುವೆ. ಪರಸ್ತ್ರೀ ಎಂಬ ಜೂಜಿಗಂಜುವೆ. ಮುನ್ನಂಜದ ರಾವಣನೇ ವಿಧಿಗೊಳಗಾದ ? ಅಂಜುವೆನಯ್ಯ ಕೂಡಲ ಸಂಗಮದೇವ.**

**ಶಿವಪೂಜೆಯೆತ್ತ ವಿಷಯದ ಸವಿಯತ್ತ ? ಆ ವಿಷಯದ ಸವಿತಲೆಗೇರಿ ಶಿವಪೂಜೆಯಬಿಟ್ಟು ವೇಶಿಯರ ಎಂಜಲ ಹೇಸದೆ ತಿಂಬ ದೋಷಿಗಳನೇನೆಂಬೆನಯ್ಯ ರಾಮನಾಥಾ.**

## ವಚನಗಳಲ್ಲಿಯ ಶಬ್ದಾಲಂಕಾರ

**ನೀನೊಲಿದರೆ ಕೊರಡು ಕೊನರುವದಯ್ಯ ।। ನೀನೊಲಿದರೆ ಬರಡುಹಯನಹುದಯ್ಯ । ನೀನೊಲಿದರೆ ವಿಷಯವೆಲ್ಲ ಅಮೃತವಹುದಯ್ಯ । ನೀನೊಲಿದರೆ ಸಕಲಪದಾರ್ಥ ಇದಿರಲ್ಲಪ್ಪುವು, ಕೂಡಲಸಂಗಮದೇವಾ !**

**ವಚನದಲ್ಲಿ ನಾಮಾಮೃತತುಂಬಿ, । ನಯನದಲ್ಲಿ ಮೂರುತಿತುಂಬಿ । ಕಿವಿಯಲ್ಲಿ ನಿಮ್ಮ ಕೀರ್ತಿತುಂಬಿ । ಮನದಲ್ಲಿ ನಿಮ್ಮ ನೆನವುತುಂಬಿ । ಕೂಡಲಸಂಗಮದೇವಾ । ನಿಮ್ಮ ಚರಣಕಮಲದೊಳು ಸೊಗದಬಂಡನುಂಬ ತುಂಬಿಯಾಗಿರ್ಪೆನು.**

ಸಮಪದಗಳ ಸಮಾಕ್ಷರಗಳ ಅಲಂಕಾರ, ಆದಿ– ಮಧ್ಯ– ಅಂತ್ಯ ಪ್ರಾಸಗಳು, ಮನೋಹರವಾಗಿವೆ. ಇಂತಹ ಅನೇಕ ವಚನಗಳನ್ನು ನಾವು ನೋಡಬಹುದು.

ವಚನದಲ್ಲಿ ( ಗದ್ಯದಲ್ಲಿ ) ತಾಲಬದ್ಧತೆಯನ್ನು ಅಪೇಕ್ಷಿಸುವದು ಅನುಚಿತವಾದರೂ, ಪದಪ್ರಯೋಗದ ಕುಶಲತೆಯಿಂದ ಸ್ವಾಭಾವಿಕವಾಗಿ ಒಂದು ಬಗೆಯ ತಾಲಬದ್ಧತೆಯು ಅನೇಕ ವಚನಗಳಲ್ಲಿ ತಾನಾಗಿಯೇ ಉಂಟಾಗಿದೆ ವಚನಗಳಲ್ಲಿ ಉಪಯೋಗಿಸಲ್ಪಟ್ಟ ದೃಷ್ಟಾಂತಗಳು ಅಂತಃಕರಣಕ್ಕೆ ನೆರವಾಗಿ ಮುಟ್ಟುತ್ತವೆ.

**“ ಕರಿಘನ ಅಂಕುಶ ಕಿರಿದೆನ್ನಬಹುದೇನಯ್ಯ । ಗಿರಿಘನವಜ್ರ ಕಿರಿದೆನ್ನಬಹುದೇನಯ್ಯ ! ತಮ್ಮಂಥ ಘನ ನಿಮ್ಮನೆನಹು ಕಿರಿದೆನ್ನಬಹುದೇ ಅಯ್ಯ ! ಕೂಡಲಸಂಗಮದೇವಾ ನಿಮ್ಮ ಕೃಪೆಯ ಘನವ ನೀವೇ ಬಲ್ಲಿರಿ.**

**‘ ಸಿಂಹದ ಮುಂದೆ ಜಿಗಿದಾಟವೇ । ಪ್ರಳಯಾಗ್ನಿಯ ಮುಂದೆ ಪತಂಗದಾಟವೇ । ಸೂರ್ಯನ ಮುಂದೆ ಕೀಟದಾಟವೇ । ನಿಮ್ಮ ಮುಂದೆ ನನ್ನಾಟವೇ ಕಲಿದೇವರದೇವಾ ?**

**ತುಂಬಿದುದು ತುಳುಕದು ನೋಡಾ । ನಂಬಿದುದು ಸಂದೇಹಿಸದು ನೋಡಾ । ಒಲಿದುದು ಓಸರಿಸದು ನೋಡಾ । ನೆರೆಯರಿದುದು ಮರೆಯದುನೋಡಾ । ಚನ್ನಮಲ್ಲಿಕಾರ್ಜುನಯ್ಯ ನೀನೊಲಿದ ಶರಣಂಗೆ ನಿಸ್ಸಿಮ ಸುಖವಯ್ಯ ।**

ಈ ಎಲ್ಲ ವಚನಗಳಲ್ಲಿ ಪ್ರಾಸಾದಿ ಶಬ್ದಾಲಂಕಾರಗಳನ್ನೂ ಶಬ್ದಗಳ

ಔಚಿತ್ಯವನ್ನೂ ತಾಲಬದ್ಧತೆಯನ್ನೂ ಸುಂದರವಾದ ದೃಷ್ಟಾಂತಗಳನ್ನು ನಾವು ನೋಡಬಹುದು. ಮುಂದಿನ ವಚನವು ಇವೆಲ್ಲವುಗಳಿಗಿಂತ ಒಂದು ಕೈಮಿಗಿಲಾಗಿದೆ.

**‘ ಅಮೃತಕ್ಕೆ ಹಸಿವು ಉಂಟೇ । ಜಲಕ್ಕೆ ತೃಷೆಯುಂಟೇ । ಘನಪುರುಷಂಗೆ ವಿಷಯವುಂಟೇ । ಸದ್ಗುರು ಕಾರಣ್ಯವಿಡಿದು ಲಿಂಗಾರ್ಚನೆಯ ಮಾಡುವ ಮಹಾಶರಣಂಗೆ ಮುಕ್ತಿಯ ಬಯಕೆಯುಂಟೆ ? । ಅವರುಗಳಿಗೆ ಅದು ಸ್ವಯಂಭು ಸಹಜಸ್ವಭಾವ । ಇನ್ನು ತೃಪ್ತಿ ಆಪ್ಯಾಯನವನರಸಲುಂಟೇ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ? ।**

ಅವ್ಯಕ್ತಸೃಷ್ಟಿಯಲ್ಲಿರುವ ಸತ್ಯಗಳನ್ನು ವ್ಯಕ್ತರೂಪಕ್ಕೆ ತರಲು ವಿವಿಧ ದೃಷ್ಟಾಂತಗಳನ್ನು ಉಪಯೋಗಿಸಿದ ವಚನಕಾರರ ಕುಶಲತೆಯು ಅವರ್ಣನೀಯವಿದೆ.

## ಅರ್ಥಾಲಂಕಾರ

ಅರ್ಥಲಂಕಾರದ ದೃಷ್ಟಿಯಿಂದ ವಿಚಾರಿಸಿದರೆ, ಉಪಮೆ, ರೂಪಕ, ಉತ್ಪ್ರೇಕ್ಷೆಗಳು ವಚನಗಳಲ್ಲಿ ಕಾಣುತ್ತವೆ. ವಚನಕಾರರು ಕೊಟ್ಟ ದೃಷ್ಟಾಂತಗಳಲ್ಲಿ ಉಪಮಾರೂಪಕಾದಿಗಳುತುಂಬಿರುವವು.

**ಜ್ಞಾನಿಯು ತಾನೆನ್ನದೆ, ಇದಿರೆನ್ನದೆ, ‘ ಕಾದಹಂಚಿನಮೇಲೆ ಬಿಟ್ಟನೀರಿನಂತೆ, ‘ಬಧೀರನ ಕಾವ್ಯದಂತೆ ’ ತಲೆದೊರದೆ ನಿಲ್ಲುವನು.** ಎಂದು ಅಂಬಿಗರ ಚೌಡಯ್ಯನು ವರ್ಣಿಸಿರುವನು. **ಹುಲಿಯಬಾಯಿಯುಲಿ ಸಿಕ್ಕ ಹುಲ್ಲೆಯಂತೆ, ಸರ್ಪನಬಾಯಲ್ಲಿ ಸಿಕ್ಕ ಕಪ್ಪೆಯಂತೆ,** ಎಂದು ಮಾಯೆಯ ಬಾಯಿಯಲ್ಲಿ ಸಿಕ್ಕ ಜಗವನ್ನು ಅಖಂಡೇಶ್ವರನು ಉಪಮಿಸಿರುವನು.

**‘ ಕರ್ಪುರದ ಗಿರಿಯನು ಉರಿಹಿಡಿದಬಳಿಕ ಇದ್ದಲುಂಟೇ. ಮಂಜಿನ ಶಿವಾಲಯಕ್ಕೆ ಬಿಸಿಲಿನ ಕಳಸವುಂಟೆ ? ಕೆಂಡದ ಗಿರಿಯ ಅರಗಿನ ಬಾಣದಲಿ ಎಚ್ಚಡೆ ಬಳಿಕ ಮರಳಿ ಬಾಣವಸರಿಸಲುಂಟೆ ? ಗುಹೇಶ್ವರ ಲಿಂಗವನರಿದ ಬಳಿಕ, ದೇವರೆಂದು ಅರಸಲುಂಟೇ ಸಿದ್ಧರಾಮಯ್ಯ ?**

ಇದೆಂತಹ ಸುಂದರವಾದ ರೂಪಕವು.

'ಮುಗಿಲಮರೆಯ ಸೂರ್ಯನಂತೆ, ನೆಲದ ಮರೆಯ ನಿದಾನದಂತೆ, ಒರೆಯ ಮರೆಯ ಅಲಗಿನಂತೆ, ಹಣ್ಣಿನೊಳಗಿನ ರಸದಂತೆ ಶರಣಶರೀರವ ಮರೆಗೊಂಡು ಪರಮಪಾವನಮೂರ್ತಿ ಪರಾಪರತಾನುತಾನಾಗಿರ್ದುದ ನೇನೆಂಬೆನಯ್ಯ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

ಇದು ಉಪಮೆಗಳ ಮುಕ್ತಾಹಾರವೆಂದೇ ಹೇಳಬಹುದು.

'**ಹಾವಿನ ಹೆಡೆಗಳಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿಕೊಳ್ಳಿಯಕೊಂಡು ಮಂಡೆಯ ಸಿಕ್ಕಬಿಡಿಸುವಂತೆ, ಹುಲಿಯ ಮೀಸೆ ಹಿಡಿದುಕೊಂಡು ಒಲೆದುಯ್ಯಲನಾಡುವಂತೆ,** ಎಂಬ ಬಸವನ ಸರಸವಾಟದ ವರ್ಣನೆಯೂ, ಮಾಡುವಮನಹೀನವಾದರೆ ಅದೇ ಕಡೆ ಎಂದು ವಿಧಿಸುವಾಗ **ಚೇಳಿಗೆ ಬಸುರಾಯಿತ್ತೆ ಕಡೆ, ಬಾಳೆಗೆ ಫಲವಾಯಿತ್ತೆ ಕಡೆ, ಕಾದುವ ಓಲೆಯಕಾರಂಗೆ ಓಸರಿಸಿತ್ತೆ ಕಡೆ,** ಎಂದು ಹೀಯಾಳಿಸುವದೂ, ಯಾವುದೇ ಶ್ರೇಷ್ಠಕವಿಯ ಕಲ್ಪನಾಶಕ್ತಿಗೂ ವರ್ಣನಾ ಸಾಮರ್ಥ್ಯಕ್ಕೂ ಸಲ್ಲುವಂತಹದಿದೆ.

ಈ ಎಲ್ಲ ಲಕ್ಷಣಗಳಿಂದ ಕೂಡಿದ ವಚನಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದರೆ ಆಶ್ಚರ್ಯವೇನು ?

ವಚನಗಳು ಕನ್ನಡಸಾಹಿತ್ಯಕ್ಕೆ ಮಾಡಿದ ಉಪಕೃತಿ ಅಷ್ಟಿಷ್ಟಲ್ಲ. ಮೊದಲಿನ ಸಾಹಿತ್ಯ ಸ್ವರೂಪವನ್ನೇ ಬದಲಿಸಿ, ಸಾಹಿತ್ಯಕ್ಕೆ ಒಂದು ವಿಶಾಲದೃಷ್ಟಿಯನ್ನು ತಂದ ಶ್ರೇಯಸ್ಸು ವಚನಗಳಿಗೇ ಸಲ್ಲುವದು.

ಸಾಹಿತ್ಯವು ಪಂಡಿತರಂಜನೆಗಾಗಿ ಇರದೆ ಜನಸಾಮಾನ್ಯರ ಜೀವನವನ್ನರಳಿಸಲು ಇದೆ ಎಂಬ ಉದಾತ್ತ ಧ್ಯೇಯವನ್ನು ಕನ್ನಡಸಾಹಿತ್ಯಕ್ಕೆ ವಚನಗಳು ಕಾಣಿಕೆಯಾಗಿ ಕೊಟ್ಟವು.

ವೇದೋಪನಿಷತ್ತುಗಳಷ್ಟೇ ಸೂತ್ರಮಯವಾಗಿ ಅರ್ಥಗರ್ಭಿತವಾಗಿ ತೇಜೋಮಯವಾಗಿ, ದೇವವಾಣಿಯಾಗಲು **ಕನ್ನಡವು ಯೋಗ್ಯವಾಗಿದೆ.** ಎಂದು ವಚನಗಳು ಜಗತ್ತಿಗೆ ತೋರಿಸಿದವು. ಜೈನರು. ಸಂಸ್ಕೃತವನ್ನು ಸಾಹಿತ್ಯದಲ್ಲಿ ಬಹುಲಗೊಳಿಸಿದರೆ ವೀರಶೈವರು ಸಂಸ್ಕೃತವನ್ನು ವಿರಲಗೊಳಿಸಿ, ಕನ್ನಡ ಸಾಹಿತ್ಯಕ್ಕೆ ಕನ್ನಡ ಮುದ್ರೆಯನ್ನೊತ್ತಿದ್ದರು.

ವಚನಗಳು ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರಿಗೊಂದು ವಿಶಿಷ್ಟಸ್ಥಾನವನ್ನು ದೊರಕಿಸಿಕೊಟ್ಟವು, ಈ ಕಾಲದಲ್ಲಿದ್ದಷ್ಟು **ಕಬ್ಬಿಗಿತಿಯರು,** ಕನ್ನಡದಲ್ಲಿ ಇನ್ನಾವ ಕಾಲದಲ್ಲಿಯೂ ದೊರೆಯಲಾರರು.

ಕನ್ನಡದ ಬೇರೆ ಯಾವುದೇ ಸಾಹಿತ್ಯಾಂಗದಲ್ಲಿ, ಕವಿಯ ವ್ಯಕ್ತಿತ್ವವು ಕಂಡುಬರುವದಿಲ್ಲ. ಕವಿಯ ಹೃದಯ, ಸ್ವಭಾವಗಳು ಸ್ಫುಟವಾಗಿ ಒಡಮೂಡಿದುದು ವಚನಗಳಲ್ಲಿಯೇ. ಇದೊಂದು ವಚನವಾಙ್ಮಯದ ವೈಶಿಷ್ಟ್ಯವೆಂದೇ ಹೇಳಬಹುದು. ಕವಿಯ ಜೀವನವೂ ಪ್ರಪಂಚಾನುಭವವೂ, ಆತ್ಮಾನುಭವವೂ, ಆ ಕಾಲದ ಸಾಮಾಜಿಕ ಜೀವನದ ಚಿತ್ರವೂ ಕೆಲವೆಡೆಗಳಲ್ಲಿ ಜೀವಂತವಾಗಿ ಚಿತ್ರಿತವಾಗಿದೆ.

ಎಂತಹ ಭಾವವನ್ನಾದರೂ ಪ್ರಕಟಿಸಲು ಕನ್ನಡವು ಸಮರ್ಥವಿದೆ ಎಂಬುದನ್ನು ವಚನಗಳು ಸಿದ್ಧಪಡಿಸಿದವು.

ಅಂತೂ ಕನ್ನಡ ಸಾಹಿತ್ಯವಾಹಿನಿಗೆ, ಕನ್ನಡದ ಮುದ್ರೆಯನ್ನೊತ್ತಿದವರು, ವಚನಕಾರರೇ ಎಂದು ಸ್ಪಷ್ಟವಾಗಿ ಹೇಳಬಹುದು.

---

ಈ ಭಾಗವನ್ನು ವಚನಶಾಸ್ತ್ರರಹಸ್ಯದ ಆಧಾರದ ಮೇಲಿಂದ ಬರೆಯಲಾಗಿದೆ. ಅದರಲ್ಲಿಯ ವಚನಗಳನ್ನೇ ತೆಗೆದುಕೊಂಡಿದೆ.

# ೭. ಕೀರ್ತನೆಗಳು

೧೬ನೇ ಶತಮಾನವು ಕನ್ನಡಸಾಹಿತ್ಯದ ಮಹತ್ವವಾದ ಕಾಲವು. ಸಾಹಿತ್ಯವು ಸಂಗೀತದ ರೂಪವನ್ನು ತಾಳಿ ಕೀರ್ತನರೂಪದಿಂದ ಅಮೃತ ಪ್ರವಾಹವನ್ನೇ ಹರಿಯಿಸಿ ಜನಸಾಮಾನ್ಯರ ಸ್ವತ್ತಾಯಿತು. ಈಶ್ವರ ಭಕ್ತಿಯಿಂದ ಪ್ರೇರಿತರಾದ ಭಕ್ತರು ಜನಸಾಮಾನ್ಯರಲ್ಲಿ ಭಕ್ತಿಯ ಬೀಜಗಳನ್ನು ಬಿತ್ತಿದರು. ಜ್ಞಾನ, ಭಕ್ತಿ, ವೈರಾಗ್ಯಗಳು ಮುಮುಕ್ಷುಗಳ ಹೃದಯದಿಂದ ಕೀರ್ತನ ರೂಪವಾಗಿ ಹೊರಬಿದ್ದುವು. **'ಭಕ್ತಿಶ್ಚ ತತ್‌ಸಾಧನಂ'** ಮುಕ್ತಿಗೆ ಭಕ್ತಿಯೇ ಪರಮಸಾಧನವೆಂದು ಸಾರಿದ ಶ್ರೀಮನ್ **ಮಧ್ವಾಚಾರ್ಯರ** ಅವತಾರದಿಂದ ಈ ಪಂಥಕ್ಕೆ ಕಳೆಯೇರಿತು. ಅವರು ಪರಮ ಭಗವದ್ಭಕ್ತರು. ಅವರನ್ನೇ ಗುರುಗಳನ್ನಾಗಿ ಇಟ್ಟುಕೊಂಡ **ವೈಷ್ಣವದಾಸರು** ಅವರ ದಿವ್ಯಸ್ಫೂರ್ತಿಯಿಂದ ಕರ್ನಾಟಕದಲ್ಲಿ ಭಕ್ತಿಪ್ರವಾಹವನ್ನೇ ಹರಿಸಿದರು. ಈ ವೈಷ್ಣವದಾಸರ ಭಕ್ತಿರಸವು ಬಂಗಾಲಕ್ಕೆ ನವಚೈತನ್ಯವನ್ನು ಕೊಟ್ಟಿತು. ಭಕ್ತಶ್ರೇಷ್ಠನಾದ **ಗೌರಾಂಗ ಚೈತನ್ಯನು** ದಾಸವರ್ಯರಾದ **ಶ್ರೀ ವ್ಯಾಸರಾಯರಿಂದ** ಭಕ್ತಿದೀಕ್ಷೆಯನ್ನು ಹೊಂದಿದನು. ದಾಸ ಶ್ರೇಷ್ಠರಾದ **ಪುರಂದರ** ದಾಸರ ಕೀರ್ತನೆಗಳಿಂದ ಸ್ಫೂರ್ತಿಗೊಂಡ **ತ್ಯಾಗರಾಜನು** ತನ್ನ ಕೃತಿಗಳಿಂದ ಆಂಧ್ರದಲ್ಲಿ ಭಕ್ತಿರಸದ ಹೊಳೆಯನ್ನು ಹರಿಸಿದನು. ಹೀಗೆ ವೈಷ್ಣವ ದಾಸರ ಈ ಭಕ್ತಿರಸದ ಕೀರ್ತನೆಗಳು ಆ ಕಾಲಕ್ಕೆ ಭಕ್ತಿಸ್ಫೂರ್ತಿಯ ದಿವ್ಯಜ್ಯೋತಿಗಳಾದವು. ಈ ಜ್ಯೋತಿಯಲ್ಲಿಯೇ ವೈಷ್ಣವರಂತೆ ಶೈವರೂ ಹಾಗು ವೀರಶೈವರೂ ಕೀರ್ತನೆಗಳನ್ನು ರಚಿಸಿರುವರು. ಜನಮನದಲ್ಲಿ ಈಶ್ವರ ಪ್ರೇಮತರಂಗಗಳನ್ನು ಎಬ್ಬಿಸಿ ಮುಕ್ತಿಪಥಕ್ಕೆ ಮುಟ್ಟಿಸುವ ಈ ವಾಙ್ಮಯವು ಸಾಹಿತ್ಯದಲ್ಲಿ ಅಗ್ರಸ್ಥಾನವನ್ನು ಪಡೆಯದೆ ಯಾವುದು ಪಡೆಯಬೇಕು?

ಈ ಭಕ್ತಿವಾಙ್ಮಯವು, ಅರ್ಥಾತ್ ಕೀರ್ತನೆಗಳು, ಅನೇಕ ಶತಕ

ಗಳಿಂದ ಸಂಸ್ಕೃತದ ಬೀಗ ಮುದ್ರೆಯಿಂದ ಬಾಧಿಸಲ್ಪಟ್ಟ ಭಕ್ತಿಭಂಡಾರವನ್ನು ಸೂರೆಗೆಯ್ವುವು. ಸಂಸ್ಕೃತವನ್ನರಿಯದ ಆರ್ತ ಭಕ್ತಹೃದಯಗಳನ್ನು ತಮ್ಮ ಹರಿಭಕ್ತಿಸುಧೆಯಿಂದ ತಣಿಸುವವು. ಆದರೆ ತಾವು ಆರ್ಯರು, ಸಂಸ್ಕೃತವು ದೇವಭಾಷೆಯೆಂದು ಹೆಮ್ಮೆಯ ಬಿಂಕದಿಂದ ಬಿಗಿದ ಪಂಡಿತೋತ್ತಮರು ಇದನ್ನು ಹೇಗೆ ಸಹಿಸುವರು ?

೧ನೇ ಶತಮಾನದಿಂದ ಪ್ರಾರಂಭವಾದ ಕನ್ನಡದ ಹೋರಾಟವು ಇನ್ನೂ ನಡೆದೇಯಿತ್ತು. ಸಂಸ್ಕೃತ ಛಂದಸ್ಸನ್ನು ತ್ಯಜಿಸಿ ಕನ್ನಡದ ಸಾಹಿತ್ಯವು ತನ್ನ ನಡಿಗೆಯಲ್ಲಿ ನಡೆದಿತ್ತು. ಬಸವೇಶ್ವರನು ತನ್ನ ವಿಶಿಷ್ಟ ಶೈಲಿಯಿಂದ ಎಂತಹ ಭಾವನನ್ನಾದರೂ ಕನ್ನಡದಲ್ಲಿ ಹೇಳಬಹುದೆಂದು ತೋರಿಸಿದ್ದನು. ಕವಿಗಳು ತಮ್ಮ ಕಾವ್ಯಶಕ್ತಿಯಿಂದ ಮಹಾ ಕಾವ್ಯಗಳನ್ನು ರಚಿಸಿ ತೋರಿಸಿದ್ದರು. ಉಪನಿಷದಗಳ ಸೂತ್ರಮಯವಾದ ಅರ್ಥವನ್ನು ಸೂತ್ರರೂಪವಾಗಿ ಅಷ್ಟೇ ಬಿಗುವಿನಿಂದ ಹೇಳಬಹುದೆಂಬುದನ್ನು ವಚನಗಳು ಸಿದ್ಧಮಾಡಿ ತೋರಿಸಿದ್ದವು. ಆದರೂ ಆರ್ಯರೆಂದು ಹೇಳಿಕೊಳ್ಳುವ ಬ್ರಾಹ್ಮಣರು, ಇದೆಲ್ಲವೂ ಜನಸಾಮಾನ್ಯರ, ಪಾಮರರ, ಬುದ್ಧಿಹೀನರ ನುಡಿಯೆಂದು ಹಳಿಯುವುದನ್ನು ಬಿಡಲಿಲ್ಲ. ( ಇಂದಿಗೂ ಈ ಭಾವನೆಯು ಹೋಗಿಲ್ಲ. ಗೋಕರ್ಣದಲ್ಲಿ ಹಲವು ಬ್ರಾಹ್ಮಣ ಮನೆತನಗಳು ಮಡಿಯಿಂದ ಇರುವಾಗ ಕನ್ನಡ ಮಾತನಾಡುವುದು ಮೈಲಿಗೆ ಎಂದು ತಿಳಿಯುತ್ತವೆ) ಅರ್ಥಾತ್ ಕನ್ನಡವು, ಅವರಿಗೆ ಮಾನ್ಯವೆನಿಸಲಿಲ್ಲ. ದಾಸರ ಕೀರ್ತನೆಗಳ ವಿಷಯವಾಗಿಯೂ ಇದೇ ಮಾತು, ಆ ಕಾಲದಲ್ಲಿ ತಲೆಯೆತ್ತಿತು. **ದಾಸ ಶ್ರೇಷ್ಠರಾದ ವ್ಯಾಸರಾಯರು (೧೫೩೫)** ಪುರಂದರದಾಸರ ಕೀರ್ತನೆಗಳ ಮಹಿಮೆಯನ್ನು ಕಂಡು, ಶ್ರೀ ಮಧ್ವಾಚಾರ್ಯರ **ಸರ್ವಮೂಲ** ಗ್ರಂಥಗಳೊಡನೆ, ಅವುಗಳನ್ನು ಇಟ್ಟು ಪೂಜಿಸಿದರು. ಆಗ ಮಠದ ವಿದ್ವಾಂಸರೆಲ್ಲರೂ ರೇಗಿಗೆದ್ದು, ಚಿನವಾರನ ಹಾಡುಗಳು ಎಷ್ಟೇ ಚೆನ್ನಾಗಿರಲಿ, ಸರ್ವಜ್ಞರ ಸರ್ವಮೂಲವನ್ನು ಸರಿಗಟ್ಟುವವೇ ? ಅಯೋಗ್ಯ ! ಪೂಜೆಯು ಅಯೋಗ್ಯ ! ವೆಂದು ಕೂಗನ್ನೆಬ್ಬಿಸಿ ಹಾಡುಗಳ ಹೊತ್ತಿಗೆಯನ್ನು ಕಿತ್ತೊಗೆದಂತೆಯೂ, ಆದರೆ ಅವು ಮತ್ತೆ ಅದೇ ಸ್ಥಾನವನ್ನು ಅಲಂಕರಿಸಿದಂತೆಯೂ, ಕಥೆಯುಂಟು.

ಆಗ ವ್ಯಾಸರಾಯರು ಅವ್ರುಗಳಿಗೆ ‘ ಪುರಂದರೋಪನಿಷತ್ತು, ಎಂದು ಕರೆದು, ಅವ್ರುಗಳ ಮಹಿಮೆಯನ್ನು ಹೊಗಳಿದರಂತೆ. ಅವರ ಸಮಕಾಲೀನರೂ, ವ್ಯಾಸರಾಯರ ಮಠದಲ್ಲಿಯೇ ಇದ್ದವರೂ ಪುರಂದರದಾಸರ ಮಕ್ಕಳೂ, ಆದ ವರದಪ್ಪನಾಯಕರು ಇದನ್ನೇ ದೇವರ ನಾಮವಾಗಿ ಹಾಡಿರುವರು.

**ಎರಡಾವರ್ತಿ ಬೀಸಾಡಲಾಗಿ ಅದು ।**
**ತಿರುತಿರುಗಿ, ಬಂದುಮೇಲೆ ಕುಳ್ಳಿರಲು ॥**
**ಗುರುವ್ಯಾಸರಾಯರು ನೋಡಿ ಹರುಷದಿಂದ ।**
**ಪುರಂದರ ಉಪನಿಷತ್ತೆಂದು ಕರೆದರು. ॥**

ವರದಪುರಂದರ ವಿಠಲರು

**“ ಮಾಧವನ ಗುಣಪೇಳ್ವ ಪ್ರಾಕೃತವಾದರೆಯು ಸರಿ ”**
**ಎಂದೂ** ದತ್ತ ಸ್ವಾ ಸಂ ೩೪ ಹರಿಕಥಾಮೃತಸಾರ

**“ ಸಂಸ್ಕೃತವಿದಲ್ಲೆಂದು ಕುಹಕುತಿ ।**
**ರಕ್ಕರಿಸಲೀಲನಹುದು. ಭಕ್ತಿಪು ।**
**ರಸ್ಸರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷಸಖಾ ॥**

ದ. ಸ್ವಾ ಸ್ವ. ೩೫

ಎಂದು ನಿಂಡಕರನ್ನು ಹೀಯಾಳಿಸಿ

**ಕೃತಿ, ಪ್ಕತಿ, ಕಥಾನ್ವಿತವೆನಿಪ ।**
**ಪ್ರಾಕೃತವೆ, ತಾಸಂಸ್ಕೃತವೆನಿಸಿ ಸದ್ಗತಿಯ ನೀವುದು**
**ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ.**

ದ, ಸ್ವಾ. ಸ. ೩೬

ಹೀಗೆ ಭಕ್ತರಿಗೆ ಅಭಯವನ್ನಿತ್ತು ಜಗನ್ನಾಥರಾಯರು **ಹರಿಕಥಾಮೃತ** ಸಾರದಲ್ಲಿ ಕನ್ನಡವನ್ನು ಎತ್ತಿಹಿಡಿದಿದ್ದಾರೆ.

**ಶ್ರೀಕೃತಿ ಪತಿಯ ಅಮಲ ಗುಣಗಳು ।**
**ಈ ಕೃತಿಯೊಳುಂಟಾದ ಬಳಿಕ**
**ಪ್ರಾಕೃತವೇ? ಸಂಸ್ಕೃತದಸಡರವೇನು ಸುಗುಣರಿಗೆ ॥**

ಎಂದು ಜಗನ್ನಾಥದಾಸರ ಶಿಷ್ಯರು ಹರಿಕಥಾಮೃತಸಾರದ ಫಲಶ್ರುತಿಯಲ್ಲಿ ನಿಂದಕರ ಬಾಯಿಗೆ ಬೀಗ ಜಗಿದಿದ್ದಾರೆ.

" ಕನ್ನಡಸೂಕ್ತಿಗಳಿವು ಎನ್ನದೆ ಕೇಳಿರಿ ಘನರು ದಯಾಪರರು "
ಎಂದು ಪ್ರಸನ್ನವೆಂಕಟರು ಸಾರಿದ್ದಾರೆ.

ಹೀಗೆ ಕನ್ನಡವು ಸಂಸ್ಕೃತದೊಡನೆ ಅಖಂಡವಾಗಿ, ಏಳುನೂರು ವರ್ಷಗಳ ವರೆಗೆ ಹೋರಾಟವನ್ನು ನಡೆಯಿಸಿ, ಕೊನೆಗೆ ಬ್ರಾಹ್ಮಣರಿಂದ ಮನ್ನಣೆ ಪಡೆಯಿತು. ಇಷ್ಟು ದಿನಗಳ ವರೆಗೆ ಸಾಹಿತ್ಯಕ್ಷೇತ್ರದಲ್ಲಿ ಕನ್ನಡವು ಮನ್ನಣೆ ಪಡೆದಿದ್ದರೂ ವೈದಿಕ ಸಾಮ್ರಾಜ್ಯದಲ್ಲಿ ಬ್ರಾಹ್ಮಣರಿಂದ ಅದಕ್ಕೆ ಮನ್ನಣೆ ದೊರೆತಿರಲಿಲ್ಲ. ಆ ಮನ್ನಣೆಯನ್ನು ದೊರಕಿಸಿಕೊಟ್ಟ ಕೀರ್ತಿಯು ಪುರಂದರದಾಸರ ಕೀರ್ತನೆಗಳಿಗೇ ಸಲ್ಲುವುದು. ಇದು **ಕನ್ನಡದ ದಿಗ್ವಿಜಯವು.**

## ದಾಸಕೂಟವು.

**ದಾಸರೆಂದರೆ ಪುರಂದರ ದಾಸರಯ್ಯಾ ।**
**ವಾಸುದೇವ ಕೃಷ್ಣನ್ನ ಪೂಜಿಸುವ ॥**

ಶ್ರೀವ್ಯಾಸರಾಯರು

ದಾಸ ಕೂಟದ ಹೆಸರನ್ನೆತ್ತಿದೊಡನೆಯೇ ಪುರಂದರ ದಾಸರೆಂದು ಎಲ್ಲರ ಎದುರಿಗೆ ಅವರ ಹೆಸರು ನಿಲ್ಲುತ್ತದೆ. ಪುರಂದರ ದಾಸರಿಂದಲೇ ದಾಸಕೂಟವು ಕಳೆಕಟ್ಟಿದರೂ, ದಾಸಕೂಟಕ್ಕೆ ಒಂದು ರೂಪ ಬಂದರೂ ಅವರಿಂದಲೇ ದಾಸಕೂಟವು ನಿರ್ಮಾಣವಾಯಿತೆಂಬುದು ನಿಜವಿದ್ದರೂ ಇವರೇ ಹರಿದಾಸರಲ್ಲಿ ಮೊದಲಿಗರು ಎಂದು ಹೇಳಲಿಕ್ಕಾಗದು. ದಾಸ ಕೂಟದ ಪರಂಪರೆಯಲ್ಲಿಯೇ,

**" ನಮಃ ಶ್ರೀಪಾದರಾಜಾಯ । ನಮಸ್ತೆ ವ್ಯಾಸಯೋಗಿನೆ ।**
**ನಮಃ ಪುರಂದರಾರ್ಯಾಯ । ವಿಜಯಾರ್ಯಾಯ ತೇನಮಃ ॥**

ಎಂದು ಪ್ರಾರ್ಥಿಸುವರು. ಅಂದರೆ ಪರಂಪರೆಯಿಂದಲೇ ಪುರಂದರ ದಾಸರು ಮೂರನೇಯವರಾಗುವರು.

ಸ್ವಲ್ಪ ಶಾಂತರೀತಿಯಿಂದ ವಿಚಾರಿಸಿದರೆ, ಭಕ್ತಿಪಂಥದ ಉಗಮವು ಬಹುದೂರದವರೆಗೆ ಹೋಗುವದು. ಯುಗ ಯುಗಾಂತರಗಳಿಂದ ಭಾಗವತ ಧರ್ಮವು ಪ್ರತಿಪಾದಿಸಲ್ಪಟ್ಟಿರುವದು. ಭಕ್ತಿಯು ದಕ್ಷಿ

ಇದಲ್ಲಿ ಹುಟ್ಟಿದ್ದರೂ " ವೃದ್ಧಿಂ ಕರ್ನಾಟಕೇ ಗತಾ '' ಎಂದರೆ ಕರ್ನಾಟಕದಲ್ಲಿಯೇ ಅದು ಪರಿಪಕ್ವವಾಯಿತೆಂದು ಪದ್ಮಪುರಾಣದಲ್ಲಿ ಉಲ್ಲೇಖವಿದೆ. ಕನ್ನಡನಾಡು ಭಕ್ತಿಯಬೀಡು. ದಾಸ್ಯಭಕ್ತಿಯಲ್ಲಿ ಪ್ರಖ್ಯಾತನಾದ ಹನುಮನುದಿಸಿದ ನಾಡು. **ವಾಯುದೇವರ** ಅವತಾರವೆಂದು ಪ್ರಸಿದ್ಧರಾದ ಶ್ರೀಮಧ್ವಾಚಾರ್ಯರು ೧೩ನೇ ಶತಮಾನದಲ್ಲಿ ಅವತರಿಸಿ, **ಪರಮಾತ್ಮನ ಪ್ರಸಾದದಿಂದಲೇ ಮುಕ್ತಿಯೆಂದೂ** ಪ್ರಸಾದಕ್ಕೆ ಸರ್ವಾರ್ಪಣಯುಕ್ತಭಕ್ತಿಯೇ ಮುಖ್ಯ ಸಾಧನವೆಂದೂ ಸಾರಿ ಭಾಗವತಧರ್ಮವನ್ನು ಮತ್ತೆ ಪುನರುಜ್ಜೀವನಗೊಳಿಸಿದರು. ಮಧ್ವರಾಯರಿಂದ ಭಕ್ತಿಪಂಥದ ಅಂಕುರವಾಯಿತು. ಅದೇ ಬೆಳೆದು ಫಲಪುಷ್ಪಗಳನ್ನು ಬಿಟ್ಟಿತು. **ಅದೇದಾಸಕೂಟವು.** ಯುಗಯುಗಾಂತರದಿಂದ ಬಂದ ಈ ಭಾಗವತ ಧರ್ಮದಲ್ಲಿಯೇ ದಾಸಕೂಟದ ಮೂಲಬೇರುಗಳಿವೆ. ಮಧ್ವಾಚಾರ್ಯರಿಂದ ಮೂರನೆಯವರಾದ ಶ್ರೀನರಹರಿ ತೀರ್ಥರಿಂದ (೧೨೮೧) ಈ ಭಕ್ತಿಪಂಥಕ್ಕೆ ಚಿಗುರೊಡೆಯಿತು. ಸಂಸ್ಕೃತ ಪಾಂಡಿತ್ಯದಿಂದ ಮಧ್ವಮತ ಪ್ರಚಾರವನ್ನೂ ಕೀರ್ತನೆಗಳಿಂದ ಭಾಗವತ ಧರ್ಮ ಪ್ರಸಾರವನ್ನೂ ಮಾಡಹತ್ತಿದರು. ಇವರನಂತರ ಮುಂದೆ, ಎರಡುನೂರು ವರ್ಷಗಳವರೆಗೆ, ಇದನ್ನು ಕಾಪಾಡುವ ಮಹಾನುಭಾವರಾರೂ ಆಗಲಿಲ್ಲ. ಆದರೆ, ಈ ಧರ್ಮಪೀಠದ ಆಶ್ರಯದಲ್ಲಿ ಅದು ಕಮರಲಿಲ್ಲ. ದಾಸಶ್ರೇಷ್ಠರೂ ದಾಸಕೂಟದ ಪಿತಾಮಹರೂ ಎಂದರೆ **ಶ್ರೀಪಾದರಾಯರೇ.** (೧೪೮೬) ದಾಸಕೂಟಕ್ಕ, ಭಾಗವತ ಧರ್ಮೋದ್ಧಾರಕ್ಕೆ ಇವರೇ ಮುಖ್ಯಕಾರಣಕರ್ತರು. **ಇವರೇ ಮೊದಲಿಗರು.** ಪೀಠಸ್ಥಶ್ರೀಗಳು. ಸಂಧ್ಯಾಸಮಯದ ಪೂಜೆಯಲ್ಲಿ ಪರಮಾತ್ಮನ ಕೀರ್ತನೆಗಳನ್ನು ಹಾಡುತ್ತ ಭಕ್ತಿಪರವಶರಾಗಿ ಮೈಮರೆತು ಕುಣಿಯುತ್ತಿದ್ದರು. ವೇಣುಗೀತ-ಗೋಪಿಗೀತ, ಭ್ರಮರಗೀತಗಳು ಇವರಿಂದ ಕನ್ನಡವಾಗಿ ಮನೆಮನೆಗಳಲ್ಲಿ ನಿತ್ಯಭಜನೆಯ ಸಾಧನಗಳಾದವು. ಜನಸಾಮಾನ್ಯರ ಅಂತಃಕರಣವನ್ನೆಲ್ಲ ಭಕ್ತಿರಸದಿಂದ ತುಂಬಿ ಬಿಟ್ಟವು. ಕುಂದಿದ ಭಕ್ತಿವೃಕ್ಷಕ್ಕೆ ಇವರಿಂದ ಕಸಿಮಾಡಿದಂತಾಗಿ, ಅದು ಭರದಿಂದ ಬೆಳೆಯಿತು. ಇವರ ಶಿಷ್ಯರಾದ **ಶ್ರೀ ವ್ಯಾಸರಾಯರಿಂದ** ಈ ವೃಕ್ಷವು ಪುಷ್ಪಪುಷ್ಟವಾ

ಯಿತು. ವ್ಯಾಸರಾಯರು ಭಕ್ತಾಗ್ರೇಸರರಿದ್ದು, ಈ ಪಂಥದ ಪ್ರಚಾರಕ್ಕೆ ಗುರುಗಳಂತೆ ಸ್ವತಃ ಟೊಂಕಕಟ್ಟಿದರು. ಭಕ್ತಿಪರವಾದ ನೂರಾರು ಹಾಡುಗಳನ್ನು ಹಾಡಿದರು. ಇವರ ಶಿಷ್ಯರಾದ ಪುರಂದರ ದಾಸರಂತೂ, ಭಕ್ತಿಪಂಥದ ಸುಮಧುರವಾದ ಫಲಪುಷ್ಪಗಳನ್ನು ಪಾಂಡುರಂಗನಿಗೆ ಅರ್ಪಿಸಿ ತಾವು ಸವಿದು, ಸಾವಿರಾರು ಜನರಿಗೆ ಅದು ಸವಿಯುಣಿಸಿದರು. ಈ ಸಾಹಿತ್ಯಕ್ಕೆ ಇದು ವಸಂತಕಾಲವೆಂದು ಹೇಳ ಬಹುದು. ದಾಸಶ್ರೇಷ್ಠರಾದ ಪುರಂದರರು, ಕನಕರು, ವಾದಿರಾಜರು, ವ್ಯಾಸರಾಯರು, ವೈಕುಂಠದಾಸರೇ ಮೊದಲಾದ ಎಲ್ಲ ಅಪರೋಕ್ಷ ಜ್ಞಾನಿಗಳೂ ಇದೇ ಕಾಲದಲ್ಲಿ ಜನಿಸಿದರು. ೧೩ನೇ ಶತಮಾನದಿಂದ ೧೮ನೇ ಶತಮಾನದವರೆಗೆ, ಹರಿದಾಸರು ತಮ್ಮ ದಿವ್ಯವಾಣಿಯಿಂದ ಸಮಾಜದ ಉದ್ಧಾರವನ್ನು ಮಾಡಿದರು.

ನರಹರಿ ತೀರ್ಥರು ( ಕ್ರಿ. ೧೨೮೧ ), ಶ್ರೀಪಾದರಾಯರು ([illegible]) ವ್ಯಾಸರಾಯರು ( ೧೪೪೭ ), ಪುರಂದರದಾಸರು ( ೧೪೮೦ ), ಕನಕ ದಾಸರು ( ೧೪೮೦ ), ವಾದಿರಾಜರು ( ೧೪೮೦ ), ವಿಜಯದಾಸರು (೧೬೮೨), ಭಾಗಣ್ಣದಾಸರು (೧೭೧೮), ಜಗನ್ನಾಥದಾಸರು (೧೭೨೭) ಮೋಹನದಾಸರು (೧೭೫೦) ತಮ್ಮಣ್ಣದಾಸರು, ಪ್ರಸನ್ನವೆಂಕಟರು ಇವರೇ ಮುಖ್ಯರೆಂದು ಹೇಳಬಹುದು.

ಪರಮಾತ್ಮನ ಪ್ರೇಮದಿಂದ ಪ್ರೇರಿತರಾಗಿ, ಭಕ್ತಿಪರವಶರಾದ ಸಮಯದಲ್ಲಿ ಹೊರಹೊಮ್ಮಿದ ಭಾವಗೀತೆಗಳು ಈ ಕಿರ್ತನೆಗಳು. ಶ್ರೇಷ್ಠ ಸಾಧಕರೂ ಅಹೇತುಕ ನಿರ್ಮಲಭಕ್ತಿಪ್ರೇರಿತರೂ ಉಚ್ಚ ಆಧ್ಯಾತ್ಮಿಕ ಅನುಭಾವಿಗಳೂ ಆದ ಈ ದಾಸಶ್ರೇಷ್ಠರು ಪರಮಕಾರುಣ್ಯದಿಂದ, ಮಠ-ಮಂದಿರಗಳಲ್ಲಿ ಹುಗಿದಿದ್ದ ದಿವ್ಯ ಧರ್ಮತತ್ವಗಳನ್ನು ಮನೆಮನೆಗೆ ಬೀರಿ ಭಕ್ತರನ್ನು ಉದ್ಧರಿಸಿದರು. ತಾವು ಸವಿದ ಭಕ್ತಿರಸದ ಅಮೃತ ವನ್ನು ಕೈಯೊಡ್ಡಿದವರಿಗೆಲ್ಲ ನೀಡಿದರು. ಪಾವನೆಗೆಯ್ದರು. ಈ ದಾಸರ ಅಮೃತತುಲ್ಯವಾದ ದಾಸ ಸಾಹಿತ್ಯವು ಶ್ರೇಷ್ಠವಾದ ಭಕ್ತಿ-ಯೋಗ ವೆಂದೇ ಹೇಳಬಹುದು.

ಈ ದಾಸ ಸಂಪ್ರದಾಯದಲ್ಲಿ ಸೇರಿದ್ದ ಕೀರ್ತನೆಗಳಲ್ಲಿ ಎರಡುಭಾಗಗಳನ್ನು ಮಾಡಬಹುದು. ಒಂದು ಭಕ್ತಿ, ಶಾಸ್ತ್ರ; ಇನ್ನೊಂದು ಮತ ಪ್ರಚಾರ.

**ಭಕ್ತಿಯೋಗದ** ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ, ಎಂಬ ಐದು ಭಾವಗಳೂ, ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಮತ್ತು ಆತ್ಮನಿವೇದನವೆಂಬ ಒಂಭತ್ತು ಸಾಧನಗಳೂ ವರ್ಣಿಸಲ್ಪಟ್ಟಿವೆ.

**ಪರಮಾತ್ಮ ಭಕ್ತಿ, ಮುಕ್ತಿಯ ಬಯಕೆ,** ದೇಹ-ಸಂಸಾರಗಳ ನಶ್ವರತ್ವ, ಅವುಗಳ ಬಗ್ಗೆ ಪೂರ್ಣವಿರಾಗ, ಭಕ್ತಿಯಸಾಧನೆ ಮೊದಲಾದವುಗಳನ್ನು ಪ್ರತಿಯೊಬ್ಬರೂ ವ್ಯಕ್ತಪಡಿಸಿದ್ದಾರೆ.

ಅವರು ಉಪಯೋಗಿಸಿದ ಭಾವ ಭಾಷೆಗಳು ಚಿತ್ರವಿಚಿತ್ರವಾಗಿವೆ. ಪುರಂದರದಾಸರ ಕೀರ್ತನೆಗಳಲ್ಲಿಯ ತಿರುಳುಗನ್ನಡವೂ ಸುಲಭತೆಯೂ ಪ್ರಸಾದವೂ ಅನ್ಯರಲ್ಲಿ ಕಾಣೆವು. ಅವರ ವಿವಿಧಭಾವಗಳೂ ಉಪಮೆಗಳೂ ಹೃದಯಂಗಮವಾಗಿವೆ. ಕನಕದಾಸರ ವೀರವಾಣಿಯೂ, ಶುದ್ಧವೂ ನಿರ್ಮಲವೂ ಆದ ಅವರ ಹೃದಯವೂ, ಅವರ ಮುಂಡಿಗೆಗಳೂ ಮನಸ್ಸನ್ನು ಮುಗ್ಧಗೊಳಿಸುತ್ತವೆ. ವಿಜಯದಾಸರ ಸರಲತೆ, ಸ್ಪಷ್ಟತೆ, ಸುಲಭತೆ, ಪದಲಾಲಿತ್ಯ, ಪ್ರಸಾದಗುಣಗಳು ಮಾನವರನ್ನು ಬೆರಗುಗೊಳಿಸುತ್ತವೆ ಜಗನ್ನಾಥದಾಸರ ಪಾಂಡಿತ್ಯ, ತತ್ವವಿವೇಚನೆ ಅರ್ಥಗಾಂಭೀರ್ಯಗಳು ಮರುಳು ಮಾಡುತ್ತವೆ. ಪ್ರಸನ್ನವೆಂಕಟರ ವಾಕ್ಪ್ರವಾಹ, ಶೈಲಿ, ಶಬ್ದಗಳ ಇಂಪಾದ ಜೋಡಣೆಗಳು ಆಶ್ಚರ್ಯಗೊಳಿಸುತ್ತವೆ.

ಈಶ್ವರ ವಿರಹದಿಂದ ಒಮ್ಮೆ ವಿಹ್ವಲರಾಗುವರು, ಪರಮಾತ್ಮನ ದರ್ಶನದಿಂದ ಮೈಮರೆವರು, ಹುಚ್ಚರಂತೆ ಕುಣಿದಾಡುವರು. ಆರ್ತಭಾವದಿಂದ ಬೇಡುವರೊಮ್ಮೆ, ಧನ್ಯಭಾವದಿಂದ ಹೊಗಳುವರೊಮ್ಮೆ, ತಾಯಿಯಾಗಿ ದೇವನೊಡನೆ ಚಿನ್ನಾಟವಾಡುವರು, ಸಖರಾಗಿ ಪರಮಾತ್ಮನೊಡನೆ ನಗೆಯಾಡುವರು. ನಿರಾಶರಾಗಿ ಒಮ್ಮೆ ತೆಗಳಿದರೆ,

ಆನಂದದಿಂದ ಮತ್ತರಾಗಿ ಒಮ್ಮೆ ಹೊಗಳುವರು. ಪ್ರಿಯುಯಾಗಿ ಪ್ರಿಯ ನನ್ನು ಮಧುರಭಾವದಿಂದ ಆರಾಧಿಸುವರು. ಹೀಗೆ ಭಕ್ತರ ಎಲ್ಲ ಭಾವಗಳು ಕನ್ನಡಿಯಲ್ಲಿ ಪ್ರತಿಬಿಂಬಿಸುವಂತೆ, ಕೀರ್ತನೆಗಳಲ್ಲಿ ಒಡಮೂಡಿವೆ. ಭಕ್ತಿಯು ಈ ಕೀರ್ತನಗಳಲ್ಲಿ ಚರಮಸೀಮೆಯನ್ನು ಮುಟ್ಟಿದೆ.

ಈ ದಾಸಕೂಟಕ್ಕೆ ದ್ವೈತಮತವೇ ಮೂಲಾಧಾರ. ಪಂಚರಾತ್ರಾಗಮ, ಭಾಗವತ, ವಿಷ್ಣುಪುರಾಣ, ವೇದೋಪನಿಷತ್ತುಗಳು ಇವೇ ಇವರಿಗೆ ಮುಖ್ಯ ಆಧಾರಗ್ರಂಥಗಳು. ಸರಿಸರ್ವೋತ್ತಮತ್ವ, ಭಕ್ತಿ, ಮೋಕ್ಷ, ಇವೇ ಇವರ ಪ್ರತಿಪಾದನದ ವಿಷಯಗಳು.

ದಾಸಕೂಟ ಸಾಹಿತ್ಯವು ಅಪರಿಮಿತವೆಂದು ಈ ಸಂಪ್ರದಾಯದವರ ಮತ. ಪುರಂದರದಾಸರು ತಮ್ಮದೊಂದು ಸುಳಾದಿಯಲ್ಲಿ

"ಇಂತು ನಾಲ್ಕು ಲಕ್ಷ ಎಪ್ಪತ್ತೈದುಸಾವಿರ ಕೃತಿಯು ।
ಕಂತು ಜನಕನ ನಾಮಘನಮಹಿಮೆ ॥
ಸಂತಸದಿ ಶೃತಿ, ಸ್ಮೃತಿ ಸಮ್ಮತದಿಂದ ।
ಪುರಂದರ ವಿಠಲ ವ್ಯಾಸ ಮುನಿಗಳು ಪೇಳಿಸಿದರು ॥

— ಪುರಂದರದಾಸರು

ಎಂದು ಹೇಳಿರುವರು. ಅಂದಮೇಲೆ, ಎಲ್ಲದಾಸರ ಸಾಹಿತ್ಯವು ಕೂಡಿ ಎಷ್ಟಿರಬಹುದು. ಆದರೆ ಇಂತಹ ಪವಿತ್ರವಾದ ವಾಙ್ಮಯವು ಹುಳ ಹುಪ್ಪಡಿಗಳ ಆಹಾರವಾಗದೆ ಬೆಳಕಿಗೆ ಒರುವದು ಅವಶ್ಯವಿದೆ.

ಕೇವಲ ಸಾಹಿತ್ಯ ದೃಷ್ಟಿಯಿಂದ ನೋಡಿದರೂ ಈ ವಾಙ್ಮಯದಲ್ಲಿ ಅತ್ಯುಚ್ಚ ಗುಣಗಳು ಕಂಡುಬರುವವು. ಮನುಷ್ಯನ ಸ್ವಭಾವಚಿತ್ರ, ಎಂತಹ ಭಾವಗಳನ್ನೂ ಸುಲಭವಾಗಿಯೂ ಲಲಿತವಾಗಿಯೂ ಹೇಳುವ ರೀತಿ, ದೇವರ ಅವತಾರಗಳನ್ನು ವರ್ಣಿಸುವ ಅವರ ಚಮತ್ಕಾರ, ರೂಪಕ, ಉತ್ಪ್ರೇಕ್ಷೆಗಳು, ಕವಿಗಳ ಕಲ್ಪಕತೆ, ಹೊಗಳತಕ್ಕಂತಹವಿವೆ. ಕಾವ್ಯದ ಲಕ್ಷಣಗಳೂ ಪ್ರತಿಭೆಯೂ ದಾಸರ ಕೀರ್ತನೆಗಳಲ್ಲಿ ಒಡೆದು ಕಾಣುತ್ತವೆ. ದಾಸರ ಕಾವ್ಯಗಳು ಆಳವಾಗಿಯೂ, ಗಂಭೀರವಾಗಿಯೂ, ಸುಲಭವಾಗಿಯೂ, ಆಕರ್ಷಕವಾಗಿಯೂ, ಉದ್ಬೋಧಕವಾಗಿಯೂ ಇದ್ದು ಮೋಕ್ಷದಾಯಕವಾಗಿವೆ.

ಈ ಕೀರ್ತನೆಗಳು, ಸುಳಾದಿಗಳೂ, ಉಗಾಭೋಗಗಳೂ, ಹಾಡುಗಳೂ ಎಂಬ ರೂಪದಲ್ಲಿವೆ. ಎಲ್ಲವೂ ಸಂಗೀತದ, ತಾಲ, ಲಯ, ರಾಗಗಳಿಗೆ ಬದ್ಧವಾಗಿ ಸುಮಧುರವಾದ ಇಂಪಿನಿಂದ ಕರ್ಣಾನಂದವನ್ನುಂಟು ಮಾಡುತ್ತವೆ. ಇಂಥ ಪವಿತ್ರವಾದ ಕೀರ್ತನೆಗಳಿಂದ ಪಾವನವಾದ ಸಂಗೀತವು, ಧನ್ಯವಲ್ಲವೇ !

## ಹರಿಯೇ ಸರ್ವೋತ್ತಮನು.

ಶ್ರೀಹರಿಯೇ ಸರ್ವೋತ್ತಮನು. ಅವನೇ ಪರದೈವತವು ಎಂಬುದೇ ಇವರ ದೃಢವಾದ ನಂಬುಗೆ.

**‘ ಹರಿಯೇಸರ್ವೋತ್ತಮ ಸಿರಿಯು ಆತನರಾಣಿ**
**ಸರಸಿಜೋದ್ಭವ ಮಾರುತ ಪುತ್ರರಯ್ಯ**

ಮೋಹನ ವಿಠ್ಠಲರು

ಶ್ರೀಹರಿಯ ಮಹಿಮೆಗಳನ್ನು ಎಷ್ಟು ಹೊಗಳಿದರೂ ಕೊಂಡಾಡಿದರೂ ದಾಸರಿಗೆ ತೃಪ್ತಿಯಿಲ್ಲ.

**‘‘ ಆರುಬಲ್ಲರು ಹರಿಹರಾದಿಗಳ ಮಹಿಮೆಯನು**
**ವಾರಿಜೋದ್ಭವ ಸುರೇಂದ್ರಾದಿಗಳಿಗಳವಲ್ಲ. ’’**

ಕನಕದಾಸರು

ಭಗವಂತನು ಭಕ್ತವತ್ಸಲನು. ಕರುಣಾನಿಧಿಯು. ಭಜಿಸಿ ಬದುಕಿರಿ ಎಂಬುದೇ ಮಾನವರಿಗೆ ದಾಸರ ಸಂದೇಶ.

**‘ ನಂಬಿ ಕೆಟ್ಟವರಿಲ್ಲವೋ ರಂಗಯ್ಯನ**
**ನಂಬದೆ ಕೆಟ್ಟರೆ ಕೆಡಲಿ.**

ಪುರಂದರದಾಸರು

## ಹರಿಭಜನೆಯ ಮಹಿಮೆ.

**‘‘ ಹರಿಯಭಜನೆ ಮಾಡೋ ನಿರಂತರ ।**
**ಪರಗತಿಗಿದು ನಿರ್ಧಾರ ನೋಡೊ ॥**

ವಾದಿರಾಜರು

## ಭಕ್ತಿಯೇ ಮುಕ್ತಿಸಾಧನ

‘ಭಕ್ತಿಶ್ಚ ತತ್ಸಾಧನಂ, ಎಂದು ದಾಸರು ಮುಕ್ತಿಯ ಬೆನ್ನು

ಬೀಳದೆ ಭಕ್ತಿಯೊಂದನ್ನನುಸರಿಸಿದರೆ, ಮುಕ್ತಿಯು ತಾನೇ ಆಳವಡುವದು ಎಂದು ಅವರ ಸಿದ್ಧಾಂತ ಭಕುತಿಯಿಂದಲೇ **"ಘನಜ್ಞಾನ ಪುಟ್ಟುವುದು, ಅನಿಮಿಷೇಶನ ಪ್ರೀತಿ ದಿನದಿನಕೆ ವೆಗ್ಗಳವಾಗುವದು'** ಎಂದು ಪುರಂದರದಾಸರು ಎದೇ ತಟ್ಟಿ ಹೇಳುವರು. **'ಭಕುತಿಯಿಲ್ಲವೊ ಅದರ ಹೊರತು ಮುಕುತಿಯಿಲ್ಲವೊ'** ಎಂದು ವಿಜಯದಾಸರು ಸಾರುವರು. **'ಹರಿಯ ಪರಮಭಕ್ತಿಯಿಂದ ಭಜಿಸನರನು ಮುಕ್ತನಲ್ಲವೆ, ಭವದಿ ಮುಕ್ತನಲ್ಲವೆ,** ಎಂದು ಜಗನ್ನಾಥದಾಸರು ಸವಾಲು ಮಾಡುವರು.

**ಭಕುತಿಯ ಪಾಲಿಸ ।ಜೀಯ ಮುಂದೆ ।**
**ಮುಕುತಿ ಗೊಡುವೆ ಯಾಕೆ ನೀನೊಲಿದ ಮೇಲೆ ॥**

ವಿಜಯವಿಠ್ಠಲರು

**ನಮೋ ನಮೋ ನಮೋ ಸಿರಿಕೃಷ್ಣವೆಂಬ ಘೋಷ ।**
**ಮುಕುತಿ ಕನ್ನಿಕೆಯ ಮದುವೆಯ ವಾದ್ಯಘೋಷ ॥**
**'ಅಚ್ಯುತಾನಂತ ಶ್ರೀಪುರಂದರ ವಿಠಲನ ।**
**ನಿಶ್ಚಲ ಭಕುತಿಯಿಂ ನೆನೆಕಂಡ್ಯಾ ಮನವೇ ॥**

ಪುರಂದರದಾಸರು

**ಭಕುತಿ ಸುಖವೋರಂಗ ಮುಕುತಿ ಸುಖವೊ ।**
**ಭಕುತಿ ಸುಖವೊ ಮುಕುತಿ ಸುಖವೊ ಯುಕುತಿವಂತರೆಲ್ಲ ಪೇಳಿ. ॥**

ವಿಜಯವಿಠಲರು

## ಆರ್ತಭಾವ

ವಿವಿಧ ದುಃಖಗಳಿಂದ ಬೆಂದು ನೊಂದು, ತನ್ನ ಶಕ್ತಿಯ ಅರಿವು ಉಂಟಾಗಿ **ದೇವರೇ ನೀನೇ ಗತಿ** ಎಂದು ಹಂಬಲಿಸಿ ಮೊರೆಯಿಡುವದೇ ಆರ್ತಭಾವವು. ಇದೇಭಕ್ತನ ಮೊದಲನೆಯ ಮೆಟ್ಟಲು ಈ ರೀತಿಯಾಗಿ ದಾಸರ ಆರ್ತಹೃದಯಗಳು ಮೊರೆಯಿಟ್ಟ ಕೀರ್ತನೆಗಳು ಸಾವಿರಾರು ಇವೆ.

**ಯಾಕೆನ್ನೊಳಿಂತು ಕೃಪೆಯಿಲ್ಲ ಹರಿಯೇ**
**ಕಾಕುಮಾಡದೆ ಕಾಯೊ ಭವದೊಳಗೆ ಬಳಲುವೆನು ॥**

ಪುರಂದರದಾಸರು

**ಯಾಕೆ ಪುಟ್ಟಿಸಿದಿ ನೀ ಸಾಕಲಾರದೆ ಜಗ_**
**ದೇಕ ಕಾರಣ ಪುರುಷನೇ ಕೃಷ್ಣಾ ॥**

ರಂಗವಿಠ್ಠಲರು

**ಸಾಕು ಸಾಕು ಮನುಜ ಸೇವೆಯು ಶ್ರೀರಂಗರಾಯಾ ।**

ಕನಕ

## ವೈರಾಗ್ಯಭಾವ

ಆರ್ತಭಾವವು ತಲೆದೋರಿದೊಡನೆ ಮನವು ದೇವರತ್ತ ಎಳೆದೊಡನೆ, ಸಿರಿಸಂಪತ್ತು, ಸ್ತ್ರೀ ಪುತ್ರಾದಿಗಳಲ್ಲಿಯ ಮೋಹವು ಕಡಿಮೆಯಾಗುವದು. ಇದೇ ವೈರಾಗ್ಯಭಾವವು. ಇದು ಭಕ್ತಿಯೋಗದ **ಎರಡನೇ ಮೆಟ್ಟಿಲು.**

**‘ ವಿಷಯದ ವಿಚಾರಬಿಡು, ವಿಹಿತ ಕರ್ಮವಮಾಡು**
**ವೈರಾಗ್ಯಭಾಗ್ಯವ ಬೇಡು ।। ’**

ಪುರಂದರದಾಸರು

**ಹಿಗ್ಗುವಿ ಯಾಕೋ ಈ ದೇಹಕ್ಕೆ ಕುಗ್ಗುವಿಯಾಕೋ ॥**
**ಮೋಸಹೋದೆನಲ್ಲ । ಸಕಲವು ವಾಸುದೇವಬಲ್ಲ ॥**

ಪುರಂದರದಾಸರು

ವೈರಾಗ್ಯವನ್ನು ಉಪದೇಶಿಸಿ, ತರುಣರನ್ನು ಸಂಸಾರಗೇಡಿಗಳನ್ನು ಮಾಡುವರೆಂದು ಯಾರೂ ತಿಳಿಯಕೂಡದು. **ಜಗತ್ತು ಸತ್ಯ**ವೆಂದು ಸಾರುವ ದಾಸರು ಸಂಸಾರವನ್ನು ತಿರಸ್ಕರಿಸಲಿಲ್ಲ ಅದರ ಮೋಹತ್ಯಾಗವನ್ನು ಮಾಡಲು ಹೇಳುವರು. ಅಲ್ಲದೆ, ಸಂಸಾರದಲ್ಲಿ ಹೇಗಿರಬೇಕೆಂಬ ಮಾರ್ಗವನ್ನೂ ಬಹುಸೊಗಸಾಗಿ ವರ್ಣಿಸುವರು.

**ಈಸಬೇಕು ಇದ್ದು ಜಯಿಸಬೇಕು ॥**

ಪುರಂದರದಾಸರು

**ಸಂಸಾರವೆಂಬಂಥ ಭಾಗ್ಯವಿರಲಿ ॥**
**ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ ॥**

ಎಂದು ವಿರಾಗ ಪೂರ್ಣರಾಗಿ ಪರಮಾತ್ಮನನ್ನು ಧ್ಯಾನಿಸುತ್ತ **ಜನಕ**ರಾಯನಂತೆ ವರ್ತಿಸಲು ಉಪದೇಶಿಸುವರು.

## ಮುಮುಕ್ಷುಭಾವ

ತಾಪತ್ರಯಗಳಿಂದ ಆರ್ತನಾಗಿ, ವಿಷಯಗಳ ಬಗ್ಗೆ ವಿರಕ್ತನಾಗಿ ಕ್ಷಣಭಂಗುರ ಸುಖವನ್ನೆಣಿಸದೆ, ನಿತ್ಯ, ನಿರಂತರ ಸುಖದತ್ತಸಾಗಲಿ ಚ್ಛಿಸುವದೇ ಮುಮುಕ್ಷುಭಾವವು. **ಇದೇ ಮೂರನೆಯ ಮೆಟ್ಟಲು.**

**ಕಂಡೂ ಕಂಡೂ ಎನ್ನ ಕೈಬಿಡುವರೆ**
**ಪುಂಡರೀಕಾಕ್ಷ ಶ್ರೀಪುರುಷೋತ್ತಮಹರೇ ॥**

ಪುರಂದರದಾಸರು

**ಇಂದು ಎನಗೆ ಗೋವಿಂದ ನಿನ್ನ ಪಾದಾರ-**
**ವಿಂದು ತೋರೊ ಮುಕುಂದ ಇಂದಿರೆ ರಮಣಾ ॥**

ವೇಣುಗೋಪಾಲರು

ಮುಮುಕ್ಷು ಜೀವವು ಪರಮಾತ್ಮನ ಚಿಂತನವನ್ನೂ ಸಾನ್ನಿಧ್ಯವನ್ನೂ ಅಪೇಕ್ಷಿಸಿ ಅತ್ಯಂತ ವಿವ್ಹಲ ಗೊಳ್ಳುತ್ತದೆ. ದೇವನಲ್ಲಿ ಮೊರೆಯಿಡುತ್ತದೆ. ಬೇಡಿಕೊಳ್ಳುತ್ತದೆ.

**ತೊರೆದು ಜೀವಿಸಬಹುದೆ ಹರಿನಿನ್ನ ಚರಣಗಳ ।**
**ಬರಿದೆ ಮಾತ್ಯಾಕಿನ್ನು ಅರಿತು ಪೇಳುವೆನಯ್ಯ ॥**

ಕನಕದಾಸರು

**ಇನ್ನೂದಯಬಾರದೆ ದಾಸನಮೇಲೆ ।**
**ಪನ್ನಂಗಶಯನ ಪಾಲ್ಗಡಲೊಡೆಯನೆ ಕೃಷ್ಣ ॥**

ಪುರಂದರದಾಸರು

**ಎಂದಿಗೆ ನಾನಿನ್ನು ಧನ್ಯನಾಹೆ ।**
**ಎಂದಿಗೆ ನಿನ್ನ ಚಿತ್ತಕೆ ಬಾಹೆ ॥**

ಪುರಂದರದಾಸರು

## ದಾಸ್ಯಭಾವ

ಮುಮುಕ್ಷುವು ಪರಮಾತ್ಮನ ಅನುಗ್ರಹಕ್ಕಾಗಿ, ವಿವಿಧ ರೀತಿ ಯಿಂದ ಭಜಿಸಲು ಯತ್ನಿಸುವನು. ದಾಸನಾಗುವನು. ಸಖನಾಗು ವನು. ತಾಯಿಯಾಗುವನು.

**ದಾಸನ್ನಮಾಡಿಕೋ ಎನ್ನಸ್ವಾಮಿ ।**
**ಸಾಸಿರ ನಾಮದ ವೆಂಕಟರಮಣಾ ॥**

ಪುರಂದರದಾಸರು

## ಸಖ್ಯಭಾವ

ಏನೆಂದು ಕೊಂಡಾಡಿ ಸ್ತುತಿಸಲೋ ದೇವಾ ।
ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಮಾಧವಾ ॥

## ವಾತ್ಸಲ್ಯಭಾವ

ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಬೆ ।
ಎಂದಪ್ಪಿಕೊಂಬೆ ನಾ ಎಂದು ಮುದ್ದಾಡುವೆ

ಪುರಂದರದಾಸರು.

ಎಂದಿಗೆ ಸವಿಮಾತು ಕೇಳಿ ನಾ ದಣಿವೆ ॥
ಎಲ್ಲಾಡಿ ಬಂದ್ಯೋ ಮುದ್ದುರಂಗಯ್ಯ ನೀ-
ನೆಲ್ಲಾಡಿ ಬಂದ್ಯೊ ಕೃಷ್ಣಯ್ಯ ॥

ರಂಗವಿಠ್ಠಲರು

## ಮಧುರಭಾವ

ಬಾರೊ ನೀ ಎನ್ನ ಮನಮಂದಿರಕ್ಕೆ, ತಡಮಾಡುವದ್ಯಾಕೆ
ಮಾರಜ ಜನಕ ಹರಿನಿನ್ನಗ್ಗಳಿಕೆ ಸ್ಮರಿಸುವೆ ಕ್ಷಣಕ್ಷಣಕೆ ॥

ಪುರಂದರದಾಸರು

ನಿನ್ನನಗಲಿ ಪೋಗಲಾರೆವೊ ನೀರಜಾಕ್ಷ
ನಿನ್ನ ಸೇರಿ ಸುಖಿಸ ಬಂದೆವೋ ॥

ವಿಜಯವಿಠ್ಠಲರು

## ಶಾಂತ-ಭಾವ

ಭಕ್ತನು ವಿಹ್ವಲತೆ, ಮೊದಲಾದ ಸ್ಥಿತಿಗಳಿಂದ ಪಾರಾಗಿ ಘನ ಜ್ಞಾನ ಪುಟ್ಟಿ ಶಾಂತನಾಗುವನು. ಶುದ್ಧಪ್ರೇಮದಿಂದ ಅವನ ಗುಣ ಗಾನಮಾಡುವನು. ಈ ಭಾವದಲ್ಲಿ ಜ್ಞಾನಜ್ಯೋತಿಯು ಬೆಳಗುವದು.

ಸಿರಿಯಲ್ಲಿಯು ನೀನೇ ಪರಮೇಷ್ಠಿಯಲ್ಲಿಯು ನೀನೇ ।
ಮರುತವಾಣಿ ಭಾರತಿ ಎಲ್ಲರಲ್ಲಿಯೂ ನೀನೇ ॥

ಗೋಪಾಲವಿಠಲರು

ಜಗದಂತರ್ಯಾಮಿ ಯೆಂದೆಂದು ನಿಮ್ಮ
ನಿಗಮಸಾರುವ ಮಾತು ಪುಸಿಯು ರಂಗ ||

## ಸರ್ವಾರ್ಪಣಭಾವ ( ಆತ್ಮನಿವೇದನ )

ಈ ಭಾವದಲ್ಲಿ ಭಕ್ತನು, ತನ್ನ ಸರ್ವಸ್ವವನ್ನು ಪರಮಾತ್ಮನಿಗೆ ಅರ್ಪಿಸಿಬಿಡುವನು. ತನ್ನ ವ್ಯಕ್ತಿತ್ವವನ್ನು ನಷ್ಟಪಡಿಸಿ ತಾನು ಕೇವಲ ನಿಮಿತ್ತಮಾತ್ರನಾಗಿ, ಉಳಿಯುವನು. ಈ ಭಾವದಲ್ಲಿ ಮನವು ಯಾವಾಗಲೂ ಪರಮಾತ್ಮನಲ್ಲಿರುವದು. ವಾಸುದೇವಃ ಸರ್ವಮಿತಿ, ಎಂಬ ಭಾವದಲ್ಲಿ ತನ್ಮಯನಾಗುವನು.

ನನ್ನಿಂದನಾನೆ ಜನಿಸಿಬಂದೆನೆ ದೇವಾ |
ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ
ನಿನ್ನದೆ ತಪ್ಪೊ ಎನ್ನದು ತಪ್ಪೋ ಗೋವಿಂದಾ ||

ವಾದಿರಾಜರು

ಇಟ್ಹಾಂಗೆ ಇರುವೆನು ಹರಿಯೇ ಎನ್ನದೊರೆಯೇ
ಶ್ರೇಷ್ಠರೊಂದಿತಪಾದ ಪದುಮ ಶ್ರೀಹರಿಯೇ ||

ರಂಗವಿಠ್ಠಲರು

## ದೇವದರ್ಶನ ಅರ್ಥಾತ್ ಸಾಕ್ಷಾತ್ಕಾರ

ಸರ್ವಾರ್ಪಣ ಮಾಡಿದ ಭಕ್ತರಿಗೆ ಫಲವೇ ದೇವದರ್ಶನವು. ಭಕ್ತಿಯೋಗಾರೂಢರಾದ ದಾಸರು ದೇವದರ್ಶನದಿಂದ ಪುಲುಕಿತವಾದ ಕೀರ್ತನೆಗಳು ಭಕ್ತಿಯೋಗದ ಸುಮಧುರವಾದ ಫಲಗಳು.

ಕೃಷ್ಣ ಮೂರ್ತಿ ಕಣ್ಣುಮುಂದೆ ಕಟ್ಟಿದಂತಿದೆ.

ಪುರಂದರದಾಸರು

ಬಂದುನಿಂದ ಕಣ್ಣುಮುಂದೆ ಬಂದುನಿಂದ |
ಬಂದುನಿಂದನಿಂದು ಭಾಗವತರ ಪ್ರಿಯ
ಕಂದರ್ಪಜನಕ ಶ್ರೀಕರುಣಸಾಗರ ಮೂರ್ತಿ ||

ವಿಜಯವಿಠ್ಠಲರು

## ಧನ್ಯಭಾವ

**ನಿನ್ನನೋಡಿ ಧನ್ಯನಾದೆನೊ ಹೇ ಶ್ರೀನಿವಾಸಾ ।**
**ಧನ್ಯನಾದೆ ನಾ ಈ ಜಗದೊಳು ।**
**ಪನ್ನಗ ಶಯನನ ಕಣ್ಣಿನಿಂದಲಿ ಕಂಡು ॥**

ಪುರಂದರರು

**ಧನ್ಯನಾದೆ ವಿಠಲನ ಕಂಡು ॥**

ಜಗನ್ನಾಥರು

**ತಂದೆ ಪುರಂದರ ವಿಠಲ ನೆಂದೆಂಬ ಪರದೈವ**
**ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥**

ಪುರಂದರದಾಸರು

**ಸೇರಿದೆನು ಸೇರಿದೆನು ಜಗಧೀಶನ ।**
**ನರಕ ಜನ್ಮದ ಭಯವು ಎನಗೆ ಇನಿತಿಲ್ಲ ॥**
**ಹರಿಪ್ರೀತಿಯಾಗಿದೆ ನೋಡಿದರೆನ್ನದೇಹ**
**ಸಿರಿ ಕೃಷ್ಣರಾಯನ್ನ ಮನಮಂದಿರದಿ ಕಂಡೆ ॥**

ವ್ಯಾಸರಾಯರು

ಏನು ಧನ್ಯರು ಇವರು ದಾಸಶ್ರೇಷ್ಠರು. ಭಕ್ತಿಯೋಗದಿಂದ ಇಷ್ಟಾರ್ಥವ ಸಾಧಿಸಿದ ಪರಮಭಕ್ತರಾದ ಈ ದಾಸರು ಧನ್ಯರು ಧನ್ಯರು ಧನ್ಯರು.

ಮಧ್ವಮತದಲ್ಲಿ ಅವರ ಸಿದ್ಧಾಂತದಲ್ಲಿ ಇವರಿಗೆ ನಿಶ್ಚಲವಾದ ವಿಶ್ವಾಸ.

**ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬ್ಯಾಡಿ । ಬಿಟ್ಟು ಕೆಡಬೇಡಿ.**

ಪುರಂದರದಾಸರು

**ಏನು ಶಪಥವ ಮಾಡಲೀ ಮತವು ಹಿರಿದೆಂದು**
**ಜ್ಞಾನಿಗಳ ಸಮ್ಮತವೋ ಪ್ರಾಣಿ ॥**
**ವರಮಧ್ವಶಾಸ್ತ್ರವೇ ಸಕಲ ಶಾಸ್ತ್ರಾಧಿಕವೆಂದು ॥**

ವಾದಿರಾಜರು

**ಆವಾವ ಕರ್ಮವು । ದೇವಾಗರ್ಪಿಸುವಂಥ**
**ಜೀವರು ಧನ್ಯರೋ । ಗೋಪಾಲ ವಿಠ್ಠಲ ॥ ಎಂದು**

ನೆನೆದು ಈ ದಾಸ ಸಾಹಿತ್ಯದ ಚರಿತ್ರೆಯನ್ನು ಮುಗಿಸುತ್ತೇನೆ.

## ಶಿವಶರಣರ ಕೀರ್ತನೆಗಳು.

ವೈಷ್ಣವದಾಸರ ಈ ಕೀರ್ತನೆಗಳ ಪರಿಣಾಮವು ಆ ಕಾಲದಲ್ಲಿ ಎಲ್ಲರ ಮೇಲೆಯೂ ಆಗುವದು ಸ್ವಾಭಾವಿಕ. ಶೈವರೂ, ವೀರಶೈವರೂ ಈ ಬೆಳಕಿನಲ್ಲಿ ಶಿವಭಕ್ತಿಯನ್ನು ಸಾರುವ ಕೀರ್ತನೆಗಳನ್ನು ರಚಿಸಿದರು. ಇವರಲ್ಲಿ ನಿಜಗುಣಶಿವಯೋಗಿಗಳೂ (೧೫೦೦), ಸರ್ಪಭೂಷಣರೂ (೧೭೦೦) ಮುಪ್ಪಿನ ಷಡಕ್ಷರಿ (೧೬೫೦), ಚಿದಾನಂದಾವಧೂತರು ಇವರೇ ಮುಖ್ಯರಾದವರು

ನಿಜಗುಣಶಿವಯೋಗಿಗಳು 'ಕೈವಲ್ಯ ಪದ್ಧತಿ ಎಂಬ ಗ್ರಂಥವನ್ನು ರಚಿಸಿದರು. ಇದರಲ್ಲಿ ತತ್ವವಿವೇಚನೆಯು ಬಹು ಮನೋಹರವಾಗಿದೆ. **ಶಂಭುಲಿಂಗವೆಂಬುದೇ** ಇವರ ಅಂಕಿತವು. ಸಂಗನಬಸವೇಶ್ವರರು 'ರಥೋದ್ಧರಣೆ' ಎಂಬ ಗ್ರಂಥವನ್ನು ರಚಿಸಿದ್ದಾರೆ ಇದು ವೇದಾಂತ ಬೋಧಕವಾಗಿದೆ ಮುಪ್ಪಿನ ಷಡಕ್ಷರಿಗಳ ಭಕ್ತಿಪರ ಹಾಡುಗಳಂತೂ ಮನೆಮನೆ ಕೇಳಬರುತ್ತವೆ. ಸರ್ಪಭೂಷಣರ–ಸಪ್ಪಣ್ಣಪ್ಪನವರ ಹೆಸರು ಕೇಳದ ವೀರಶೈವರು ದುರ್ಲಭ. ಇವರ **ಕೈವಲ್ಯಕಲ್ಪವಲ್ಲರಿಯು,** ವೀರಶೈವರ ಪಾರಾಯಣ ಗ್ರಂಥವಾಗಿದೆ. ಅನೇಕ ಗ್ರಂಥಗಳಲ್ಲಿ ಹಟಯೋಗವು ಹೆಚ್ಚಾಗಿ ವರ್ಣಿಸಲ್ಪಟ್ಟಿದೆ. ಕಾಲಜ್ಞಾನವಿದೆ. ನೀತಿಯಿದೆ. ತತ್ವಜ್ಞಾನವಿದೆ.

ಇವರ ತತ್ವಜ್ಞಾನ ಮೊದಲಾದ ವಿಚಾರಗಳನ್ನು ವಚನಗಳು ಎಂಬ ಪ್ರಕರಣದಲ್ಲಿ ಹೇಳಿದ್ದೇವೆ.

# ಯಕ್ಷಗಾನಗಳು

ಯಕ್ಷಗಾನಗಳು ಕನ್ನಡಸಾಹಿತ್ಯದಲ್ಲಿ ಒಂದು ಸ್ಥಾನವನ್ನು ಆವರಿಸಿವೆ. ಈ ಸಾಹಿತ್ಯವು ಜನಪದ ಸಾಹಿತ್ಯದ ದ್ಯೋತಕವಾಗಿದೆ. ಇದರ ಉಗಮವು, ಮಲಬಾರಿನಲ್ಲಿರುವ 'ಕಥಕಲಿ' ಯಲ್ಲಿ ಎಂದು ಹೇಳುವರು. ಕಥಕಲಿಯಲ್ಲಿ ನೃತ್ಯಾಂಗಗಳಿಂದ ಕೂಡಿದ ಅಭಿನಯವಿದೆ. ಇದಕ್ಕೆ ಕಥಾವಸ್ತುಗಳು ಪೌರಾಣಿಕ ಕಥೆಗಳು. ಜೊತೆಗೆ ತಂತುವಾದ್ಯ ಚರ್ಮವಾದ್ಯಗಳಿರುತ್ತವೆ. ನಾನಾ ಬಗೆಯ ರಸ, ಭಾವಗಳನ್ನು ತೋರಿಸುವುದಕ್ಕಾಗಿ ಅಂಗವಿಕ್ಷೇಪ, ವಿನ್ಯಾಸಗಳನ್ನು ಭರತನಾಟ್ಯಶಾಸ್ತ್ರದಂತೆ, ಉಪಯೋಗಿಸುವರು. ಪ್ರತಿಯೊಂದು ವಿಕ್ಷೇಪವಿನ್ಯಾಸಕ್ಕೆ ಒಂದು ಅರ್ಥವಿದೆ ಆ ಅರ್ಥಕ್ಕೆ ತಕ್ಕಂತೆ ಮುಖಮುದ್ರೆಯಲ್ಲಿ ಹಾವ ಭಾವಗಳಲ್ಲಿ ಬದಲಾವಣೆಗಳಾಗಬೇಕು. ಕಥಕಲಿಗೆ ಸಂಗೀತದ ಬಾಹುಲ್ಯವನ್ನು ಬೆರೆಯಿಸಿ ಈಗಿನ ಯಕ್ಷಗಾನದ ಸ್ವರೂಪಕ್ಕೆ ಇಳಿಸಿರುವರು.

ವಿಜಯನಗರದ ತುಳುವಂಶದ ರಾಜರು, ಈ ಯಕ್ಷಗಾನವನ್ನು ಈ ನಾಡಿನಲ್ಲಿ ಹರಡಿದರು. **ರಘುನಾಥನಾಯಕನು** ಸ್ವತಃ 'ಶ್ರೀ ರುಕ್ಮಿಣೀ ಕೃಷ್ಣವಿವಾಹ, ಯಕ್ಷಗಾನವನ್ನು ಬರೆದಂತೆ ಗೋವಿಂದ ದೀಕ್ಷಿತನ **'ಸಾಹಿತ್ಯಸುಧೆ,** ಯಿಂದ ತಿಳಿಯುತ್ತದೆ. ಯಕ್ಷಗಾನವು ವಿಜಯನಗರದ ಕಾಲಕ್ಕೆ ಪ್ರಾರಂಭವಾದರೂ ೧೮ನೇ ಶತಮಾನದಲ್ಲಿಯೇ ಅದು ವಿಶೇಷವಾಗಿ ಬೆಳೆದಿದೆ.

ರಾಮಕವಿಯ (೧೭೫೫) **ಪದ್ಮಾವತಿ,** ತಿಪ್ಪಯಾರ್ಯನ **ಹನುಮದ್ವಿಲಾಸ,** ಪದ್ಮರಾಜನ **ವಿಜಯ ಕುಮಾರನಕಥೆ,** ನಂಜಯ್ಯನ **ಕಪೋತವಾಕ್ಯ,** ಗಂಗನ **ಗಿರಿಜಾಕಲ್ಯಾಣ,** ಕಾಶೀರಾಮನ **ಮಲ್ಲಿಕಾರ್ಜುನ ಚರಿತೆ,** ಸ್ವಾಮಿಕವಿಯ **ರಂಗಸ್ವಾಮಿಯ ಪಾರಿಜಾತ,** ಸಾಂಬಯ್ಯನ **ಸಾರಂಗಧರನಕಥೆ,** ಮತ್ತು **ಕರಿಯ ಬಂಟನಕಥೆ,** ರಂಗಾಚಾರ್ಯರ **ಪ್ರಲ್ಹಾದ ಚರಿತ್ರೆ,** ಕಸ್ತೂರಿಸಿದ್ಧನ **ಚೋರಕಥೆಗಳು** ಯಕ್ಷಗಾನದಲ್ಲಿ ಪ್ರಸಿದ್ಧವಾಗಿವೆ.

ಈ ಯಕ್ಷಗಾನಗಳ ಪ್ರಚಾರವು ಇಬ್ಬಗೆಯಾಗಿದೆ. ದಕ್ಷಿಣ-ಉತ್ತರ ಕನ್ನಡಗಳಲ್ಲಿ ಯಕ್ಷಗಾನವೆಂಬ ಹೆಸರಿನಿಂದಲೂ ಉತ್ತರ ಕರ್ನಾಟಕದಲ್ಲಿ '**ಮೂಡಲಪಾಯ**' ಅಥವಾ ದೊಡ್ಡಾಟ-ಭಾಗವತರ ಆಟವೆಂಬ ಹೆಸರಿನಿಂದಲೂ ಪ್ರಸಿದ್ಧಿಯಾಗಿವೆ. ಯಕ್ಷಗಾನಗಳನ್ನು ತಾಳಮದ್ದಳೆಯೊಂದಿಗೆ, ಕಥೆಯಾಡುವದೂ ಉಂಟು. ಪಾತ್ರವಹಿಸಿ ಬಣ್ಣ ಬಳಿದುಕೊಂಡು ಪ್ರಸಂಗವಾಡುವದೂ ಉಂಟು. ಈ ಎರಡೂ ಪದ್ಧತಿಗಳು ದಕ್ಷಿಣ-ಉತ್ತರ ಕನ್ನಡಗಳಲ್ಲಿ ಈಗಲೂ ನೋಡಲು ದೊರೆಯುತ್ತವೆ.

ಈ ಯಕ್ಷಗಾನದೊಂದಿಗೆ ಗೊಂಬೆಯಾಟಗಳನ್ನೂ ಆಡುವದುಂಟು. ಹೊಲೆದಾಸರು **ದಾಸರ** ಆಟವೆಂದು ಆಡುವದೂ ಉಂಟು.

ಸ್ತ್ರೀಯರಿಗೆ ಸಾಹಿತ್ಯ ಪರಿಚಯವನ್ನು ಮಾಡಿಕೊಟ್ಟವುಗಳೆಂದರೆ **ಗೋಕಾವಿಯ ಅನಂತಾಚಾರ್ಯರ** ವೆಂಕಟೇಶ ಪಾರಿಜಾತ, ಪ್ರಲ್ಹಾದ ಚರಿತ್ರೆ, ಧ್ರುವಚರಿತ್ರೆ, ಶಿವಪಾರಿಜಾತ ಮೊದಲಾದ ಯಕ್ಷಗಾನಗಳೇ. ಹೆಣ್ಣುಮಕ್ಕಳ ಇಂದಿನ ನಿತ್ಯಜೀವನದಲ್ಲಿ ಇವುಗಳನ್ನು ನಾವು ನೋಡುತ್ತೇವೆ. **ಅಪರಾಲ ತಮ್ಮಣ್ಣನ** ಕೃಷ್ಣಪಾರಿಜಾತವು ಈ ಭಾಗದಲ್ಲಿ ಅತ್ಯಂತ ಲೋಕಪ್ರಿಯವಿದೆ. ಇತ್ತಿತ್ತಲಾಗಿ ಉತ್ತರಕರ್ನಾಟಕದಲ್ಲಿ ಯಕ್ಷಗಾನಗಳೂ ಬೈಲಾಟಗಳೂ ಮುಗ್ಗುತ್ತ ನಡೆದಿವೆ.

ಯಕ್ಷಗಾನದ ಉತ್ಪತ್ತಿಯು 'ಮಳಿಯಾಳಿನಲ್ಲಿ' ಎಂಬ ಮಾತು ವಿವಾದಾಸ್ಪದವಿದೆ. ನಮ್ಮ ಸಾಹಿತ್ಯವು ಇದಕ್ಕೆ ಸಮ್ಮತಿಸಲಾರದು. ನಾಟ್ಯಮಯ ಜೀವಿಗಳಾದ ರಸಿಕ ಕನ್ನಡಿಗರ ಆ ಕಾಲದ ಜನಜೀವನದ ಶೋಧವು ಇನ್ನೂ ಆಗಬೇಕಾಗಿದೆ. ಆ ಕತ್ತಲೆಯಲ್ಲಿರುವ ಮಾತುಗಳಲ್ಲಿ ಇದೊಂದು.

# ೮. ಕನ್ನಡ ಸಾಹಿತ್ಯದಲ್ಲಿಯ ಲಕ್ಷಣಗ್ರಂಥಗಳು.

ಯಾವುದೊಂದು ಸಾಹಿತ್ಯವು ಪರಿಪೂರ್ಣವೆಂದು ಅನ್ನಬೇಕಾದರೆ ಅದರ ಸಾಹಿತ್ಯಾಂಗಗಳೆಲ್ಲ ಪೂರ್ಣವಾಗಿ ಬೆಳೆದು ಪುರಿಪುಷ್ಟವಾಗಿರಬೇಕು. ಪ್ರತಿಯೊಂದು ಅಂಗವೂ ಶಾಸ್ತ್ರೀಯವಾಗಿ ತನ್ನಷ್ಟಕ್ಕೆ ತಾನು ಪೂರ್ಣವಾಗಿ ತನ್ನ ಸಾಹಿತ್ಯವನ್ನು ಪೋಷಿಸುತ್ತಿರಬೇಕು. ಅಂದರೇ ಆ ಸಾಹಿತ್ಯವು ಜೀವಂತವಾಗಿ, ತೇಜೋಮಯವಾಗಿ ಸಾಹಿತ್ಯವೆಂದು ಬಾಳಿ ಬದುಕುವದು. ಅಂದರೆ ಸಾಹಿತ್ಯದ ಜೀವಾಳವಾದ ವ್ಯಾಕರಣ ಛಂದಸ್ಸು, ಅಲಂಕಾರ, ರಸ, ಮೊದಲಾದವುಗಳು ಶಾಸ್ತ್ರವಾಗಿ ಪರಿ. ಪೂರ್ಣವಾಗಿ ಬೆಳೆದಿರಬೇಕೆಂಬರ್ಥ. ಈ ಲಕ್ಷಣ ಗ್ರಂಥಗಳಿಂದಲೇ ಆ ಸಾಹಿತ್ಯದ ಬೆಲೆಯು. ಪರಿಪೂರ್ಣತೆಯು.

ಈ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಕಡೆಗೆ ನೋಡಿದರೆ, ಯಾವ ಬಗೆಯ ಕುಂದು ಕೊರತೆಗಳೂ ಇಲ್ಲದೆ, ಸಾಹಿತ್ಯದ ವಿವಿಧಾಂಗಗಳು ಶಾಸ್ತ್ರೀಯವಾಗಿ ಬೆಳೆದು ಪೂರ್ಣಾವಸ್ಥೆಗೆ ಮುಟ್ಟಿರುವವೆಂದು ಕಂಡು-ಬರುತ್ತದೆ. ಆಯಾಯಾ ಕಾಲಕ್ಕೆ ವ್ಯಾಕರಣದ ಕಟ್ಟು ಕಟ್ಟಳೆಗಳಿಂದ ಭಾಷೆಗೆ ಶುದ್ಧ ಸ್ವರೂಪವನ್ನು ಕೊಟ್ಟದ್ದು ಕಾಣುತ್ತದೆ ಕವಿಗಳ ಬಗೆಗೆ ತಕ್ಕಂತೆ, ವಿವಿಧ ಛಂದಸ್ಸುಗಳ ನಿರ್ಮಾಣವು ಕಂಡುಬರುತ್ತದೆ. ಈ ಪ್ರಕರಣದಲ್ಲಿ, ಕನ್ನಡ ಸಾಹಿತ್ಯದ ಲಕ್ಷಣ ಗ್ರಂಥಗಳಾದ **ವ್ಯಾಕರಣ, ಛಂದಸ್ಸು, ಅಲಂಕಾರ, ರಸ, ಶಬ್ದಕೋಶ** ಇವೇ ಮೊದಲಾದವುಗಳು ಹೇಗೆ ಬೆಳೆದು ಕನ್ನಡ ಸಾಹಿತ್ಯವಾಹಿನಿಗೆ ಪೋಷಕವಾಗಿವೆ ಎಂಬುದನ್ನೇ ವಿಚಾರ ಮಾಡಬೇಕಾಗಿದೆ. ಪ್ರತಿಯೊಂದರ ಇತಿಹಾಸವನ್ನು ಇದೇ ಅನುಕ್ರಮದಿಂದ ವಿವರಿಸುತ್ತ ಹೋಗುತ್ತೇವೆ.

## ಕನ್ನಡ ವ್ಯಾಕರಣಗಳು

ಮಾನವನ ಅಂತಃಕರಣದಲ್ಲಿಯ ವಿವಿಧ ಭಾವನೆಗಳು ನುಡಿಯ ರೂಪದಿಂದ ಹೊರಬೀಳುತ್ತವೆ. ಅದೇ ನುಡಿಯು ಗ್ರಂಥಸ್ಥವಾಗಿ ಸಾಹಿತ್ಯ

ರೂಪವನ್ನು ತಾಳುತ್ತದೆ. ದೇಶ, ಕಾಲ, ಪರಿಸ್ಥಿತಿಗೆ ಅನುಸರಿಸಿಯೂ, ಭಾವಗಳ ವೈವಿಧ್ಯಕ್ಕೆ ತಕ್ಕಂತೆಯೂ ಸಾಹಿತ್ಯವು ವಿವಿಧ ರೂಪಗಳನ್ನು ತಾಳಿ ಬೆಳೆಯಹತ್ತುತ್ತದೆ. ಆಚಾರ, ವಿಚಾರ, ಉಚ್ಚಾರಗಳಲ್ಲಿ ವಿವಿಧತ್ವವು ಬೆಳೆದೊಡನೆಯೆ ಭಾಷೆಯು ಏಕತ್ವಕ್ಕಾಗಿ ಕಟ್ಟುನಿಟ್ಟುಗಳ ಆವಶ್ಯಕತೆಯು ತಲೆದೋರುತ್ತದೆ ಈ ಭಾವನೆಯೇ ಬೆಳೆದು ವ್ಯಾಕರಣಗಳು ಉದಯವಾಗುತ್ತವೆ. ಎಲ್ಲ ಸಾಹಿತ್ಯಗಳಲ್ಲಿಯೂ ಕಂಡುಬರುವ ಸಾಮಾನ್ಯ ನಿಯಮವಿದು.

ಕನ್ನಡ ಸಾಹಿತ್ಯವು ೪-೫ನೆಯ ಶತಮಾನಗಳಿಂದ ಬೆಳೆದು ಬಂದಿದ್ದರೂ ೧೨ನೇ ಶತಮಾನದ ವರೆಗೆ, ನಮಗೆ ವ್ಯಾಕರಣ ಗ್ರಂಥಗಳು ದೊರೆಯುವದಿಲ್ಲ. ನಾಗವರ್ಮನ (೧೧೪೫) **ಶಬ್ದಸ್ಮೃತಿ, ಭಾಷಾ ಭೂಷಣ**ಗಳೇ ನಮಗೆ ಪ್ರಾಚೀನ. ಆದರೆ ಆದಿಕವಿಯಾದ ನೃಪತುಂಗನು ತನ್ನ ಕವಿರಾಜಮಾರ್ಗದಲ್ಲಿ ವ್ಯಾಕರಣದ ಬಗ್ಗೆ ಕೆಲವು ಕಟ್ಟಳೆಗಳನ್ನು ಹೇಳುತ್ತಾನೆ. ಕನ್ನಡ ಭಾಷೆಯಲ್ಲಿ ಉತ್ತರ ದಕ್ಷಿಣಗಳೆಂಬ ಎರಡು ಮಾರ್ಗಗಳಿದ್ದು ಅವುಗಳ ಪದ ಪ್ರಯೋಗದಲ್ಲಿಯೂ ಭೇದವಿದೆ ಎಂದು ತೋರಿಸುತ್ತಾನೆ. ಸಂಸ್ಕೃತ ಶಬ್ದಗಳ ವಿಪರೀತ ಬೆರಿಕೆಯನ್ನು ನಿಷೇಧಿಸುತ್ತಾನೆ. ಅರಿಸಮಾಸವನ್ನು ಮಾಡಕೂಡದೆಂದು ಕಟ್ಟುಮಾಡುತ್ತಾನೆ. ಅಂದರೆ ಇವನ ಕಾಲಕ್ಕೆ ಭಾಷೆಯು ಬೆಳೆದು ವಿವಿಧ ರೂಪಗಳನ್ನು ತಾಳಿತ್ತೆಂದೂ, ವ್ಯಾಕರಣದ ಆವಶ್ಯಕತೆಯು ತಲೆದೋರಿತ್ತೆಂದೂ ವ್ಯಕ್ತವಾಗುವದು. ನೃಪತುಂಗನಿಂದ ಮುಂದೆ ಕನ್ನಡ ಸಾಹಿತ್ಯವು ಬಳ್ಳೇ ಹುಲುಸಾಗಿ ಬೆಳೆಯಿತು. ೧೨ನೇ ಶತಮಾನವೆಂದರೆ ಸಾಹಿತ್ಯಕ್ಕೆ ಯೌವನ. ಆಗ ವ್ಯಾಕರಣದ ಆವಶ್ಯಕತೆಯುಂಟಾಗುವದು ಸ್ವಾಭಾವಿಕ. ಇದೇ ಸುಮಾರಿಗೆ ನಯಸೇನನು (೧೧೧೨) ಉದಯವಾದಂತೆ ತಿಳಿಯುತ್ತದೆ. ನಾಗವರ್ಮನು ತನ್ನ ಭಾಷಾ ಭೂಷಣದ ಎಪ್ಪತ್ತೆರಡನೇ ಸೂತ್ರದಲ್ಲಿ "ದೀರ್ಘೋಕ್ತಿ ನಯಸೇನಸ್ಯ" ನಯಸೇನನ ಮತಾನುಸಾರವಾಗಿ ಸಂಬೋಧನಕ್ಕೆ ದೀರ್ಘ ಉಂಟೆಂದು ಹೇಳುವದರಿಂದ, ನಯಸೇನನೂ **ವ್ಯಾಕರಣ ಗ್ರಂಥ**ವನ್ನು ಬರೆದಂತೆ ಕಂಡುಬರುವದು. ಆದರೆ ಈ

ಗ್ರಂಥವು ಇನ್ನೂ ಬೆಳಕಿಗೆ ಬಂದಿಲ್ಲ. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಸುಪ್ರಸಿದ್ಧ ವೈಯಾಕರಣಿಯಾದ ನಾಗವರ್ಮನು ತಲೆದೋರುವನು.

ಈಗ ಪ್ರಸಿದ್ಧವಿರುವ **ನಾಗವರ್ಮನ** "ಕರ್ನಾಟಕ ಭಾಷಾ-ಭೂಷಣ, ಶಬ್ದಸ್ಮೃತಿ"ಗಳೇ ಇಂದಿನ ಗ್ರಂಥಸ್ಥ ಪ್ರಾಚೀನ ಕನ್ನಡ ವ್ಯಾಕರಣಗಳು. ಇದರಲ್ಲಿ ಶಬ್ದಸ್ಮೃತಿಯು ಕಾವ್ಯಾವಲೋಕನವೆಂಬ ಅಲಂಕಾರ ಗ್ರಂಥದ ಭಾಗವು. ಅದರ ಆದಿ ಭಾಗದಲ್ಲಿ ವ್ಯಾಕರಣವನ್ನು ಸಂಗ್ರಹವಾಗಿ ಹೇಳಿದೆ. ಇದೇ **ಶಬ್ದಸ್ಮೃತಿಯು** ಇದರಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ ಎಂದು ಐದು ಅಧ್ಯಾಯಗಳಿವೆ. ಇದು ಕನ್ನಡ ಭಾಷೆಯಲ್ಲಿಯೇ ಇದೆ. ಎರಡನೆಯ ಗ್ರಂಥವೆಂದರೆ ಕರ್ನಾಟಕ ಭಾಷಾ ಭೂಷಣವು. ಇದರಲ್ಲಿಯ ಸೂತ್ರಗಳೂ ವೃತ್ತಿಯೂ ಸಂಸ್ಕೃತದಲ್ಲಿ ಬರೆಯಲ್ಪಟ್ಟಿವೆ. ನಾಗವರ್ಮನು ತನ್ನ ಪೂರ್ವ ಕವಿಗಳ ಕನ್ನಡ ಗ್ರಂಥಗಳಿಂದಲೇ ಉದಾಹರಣೆಯನ್ನು ಕೊಟ್ಟಿದ್ದಾನೆ. ಇದರಲ್ಲಿ ೨೮೦ ಸೂತ್ರಗಳಿದ್ದು ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಶಬ್ದರೀತಿ, ಸಮಾಸ, ತದ್ಧಿತ, ಆಖ್ಯಾತ ನಿಯಮ, ಅವ್ಯಯ, ನಿರೂಪಣ, ನಿಪಾತ ನಿರೂಪಣ ಎಂದು ಹತ್ತು ಪರಿಚ್ಛೇದಗಳಾಗಿ ಗ್ರಂಥವು ವಿಸ್ತರಿಸಲ್ಪಟ್ಟಿದೆ. ೮ನೆಯ ಶತಮಾನದಿಂದ ೧೨ನೆಯ ಶತಮಾನದ ವರೆಗೆ ಬೆಳೆದು ಬಂದ ಸಾಹಿತ್ಯದ ಪ್ರತಿಬಿಂಬವೇ ಕರ್ನಾಟಕ ಭಾಷಾ ಭೂಷಣವೆಂದು ಹೇಳಬಹುದು. ಗ್ರಂಥದ ಕೊನೆಯಲ್ಲಿ ನಾಗವರ್ಮನು ಈ ರೀತಿಯಾಗಿ ಹೇಳಿಕೊಂಡಿದ್ದಾನೆ.

**"ಕರ್ನಾಟಕ ಶಬ್ದ ಸೂತ್ರಾಣಿ । ಲೋಕವ್ಯುತ್ಪತ್ತಿ ಹೇತವೇ ।**
**ರಚಿತಾನಿ ಸ್ಫುಟಾರ್ಥಾನಿ । ಕೃತೀನಾ ನಾಗವರ್ಮಣಾ ॥**

೧೩ನೇ ಶತಮಾನದಲ್ಲಿ ಹಳಗನ್ನಡವು ಕಾಲ್ದೆಗೆದು ನಡುಗನ್ನಡವು ತಲೆಯೆತ್ತಿತ್ತು. ಪರೆಯನ್ನು ತೊರೆದ ಹಾವಿನಂತೆ, ಕನ್ನಡ ಸಾಹಿತ್ಯವು ಚಂಪೂ ರೂಪವನ್ನು ಬಿಟ್ಟು, ಹೊಸ ವೇಷದಿಂದ ಮುಂದೆ ಸಾಗಿತ್ತು. ಇಂತಹ ಸಂಧಿಕಾಲದಲ್ಲಿ **ಕೇಶಿರಾಜನು** (೧೨೬೦) ವ್ಯಾಕರಣವನ್ನು ಬರೆಯಲು ಮುಂದಾದನು. ಇವನ **ಶಬ್ದಮಣಿದರ್ಪಣದಲ್ಲಿ** ಹೊಸ ಹಳೆ

ಕಾಲಗಳ ಪಡಿನೆಳಲನ್ನು ಕಾಣಬಹುದು. ಹಳೆಯುದನ್ನು ಬಿಡಲಾರದ ದೃಶ್ಯವು ಕಣ್ಣಿಗೆ ಬೀಳುವದು. ೞ ೞ ಕುಳಗಳನ್ನು ಉಳಿಸುವ ಹೆಣಗಾಟವು ಕಾಣುವದು. ಹೊಸದನ್ನು ತಡೆಗಟ್ಟುವ ಸಾಹಸವು ತೋರುವದು.

ಶಬ್ದಮಣಿದರ್ಪಣವು ಹಳಗನ್ನಡ ಭಾಷೆಗೆ ಪ್ರಮಾಣ ಗ್ರಂಥವು. ನಾಗವರ್ಮನ ಭಾಷಾಭೂಷಣಕ್ಕಿಂತಲೂ, ಇದರಲ್ಲಿ ಹೆಚ್ಚು ವಿಷಯುಗಳು ಅಡಕವಾಗಿವೆ. ಇಲ್ಲಿ ನಾವು ಇನ್ನೊಂದು ಮಾತನ್ನು ಗಮನಕ್ಕೆ ತೆಗೆದುಕೊಳ್ಳಬೇಕು. ಕನ್ನಡ ಸಾಹಿತ್ಯವು ಸಂಸ್ಕೃತ ಛಂದಸ್ಸನ್ನು ತ್ಯಜಿಸಿ ಕನ್ನಡವಾಗುತ್ತ ನಡೆದಿತ್ತು. ನಾಗವರ್ಮನ ಭಾಷಾ ಭೂಷಣವು ಸಂಸ್ಕೃತದ ರೀತಿಯುಲ್ಲಿಯುದು. ಸಾಹಿತ್ಯದ ಹೊಸ ರೀತಿಯಿಂದ ಶಬ್ದ-ಮಣಿದರ್ಪಣಕ್ಕ, ಕನ್ನಡದ ಸ್ವರೂಪವು ಸ್ವಾಭಾವಿಕವಾಗಿ ಪ್ರಾಪ್ತವಾಯಿತು. ಇದರಲ್ಲಿ ಇದೊಂದು ವೈಶಿಷ್ಟ್ಯವು. ಕವಿಯು ಕನ್ನಡ ಭಾಷೆಯು ಸ್ವರೂಪವನ್ನು ಸಂಕ್ಷೇಪವಾಗಿ ವರ್ಣಿಸಿದ್ದಾನೆ.

**“ ಗಮಕ ಸಮಾಸದಿಂ ೞ ೞ ಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ।**
**ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ ॥**
**ವಮಹಪ ಭೇದದಿಂ ವಿರಹಿತ್ಯಾವಯ ಸಂಸ್ಕೃತ ಲಿಂಗದಿಂ ಪದೋ।**
**ತ್ತಮ ಶಿಥಿಲತ್ವದಿಂ ಯತಿ ವಿಲಂಘನದಿಂಚರಿದಲ್ತೆ ಕನ್ನಡಂ ॥**

ಶಬ್ದಮಣಿದರ್ಪಣದಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಸಂಧಿಗಳಿವೆ. ಗ್ರಂಥದ ಕೊನೆಯಲ್ಲಿ ‘ ಪ್ರಯೋಗಸಾರವೆಂಬ ಶಬ್ದಾರ್ಥ ನಿರ್ಣಯಂ ’ ಎಂಬ ಹೆಸರಿನಿಂದ ಒಂಬತ್ತನೆಯ ಸಂಧಿಯೊಂದಿದೆ. ಇದರಲ್ಲಿ ಮೊದಲಿನ ಕವಿಗಳು ಉಪಯೋಗಿಸಿದ ಗೂಢ ಪದಗಳ ಅರ್ಥವನ್ನು ಕೊಟ್ಟಿದ್ದಾನೆ. ತನ್ನ ಕಾಲದ ಗ್ರಂಥೋಪಯುಕ್ತ ಧಾತುಗಳನ್ನೆಲ್ಲ ಅಂತ್ಯಾಕ್ಷರಪ್ರಾಸಾನುಕ್ರಮದಿಂದ ಸಂಗ್ರಹಿಸಿದ್ದಾನೆ.ಉಳಿದ ವ್ಯಾಕರಣಕಾರರು ಮಾಡದ ಕೆಲಸವಿದು. ಅಲ್ಲದೆ ಕೃತ್ ತದ್ಧಿತಗಳ ವಿಚಾರವನ್ನು ಕೇಶಿರಾಜನಷ್ಟು ಇನ್ನಾರೂ ಮಾಡಿಲ್ಲ. ಈ ಗ್ರಂಥದಲ್ಲಿಯ ಸೂತ್ರಗಳು ಕಂದರೂಪವಾಗಿವೆ. ಅವುಗಳಿಗೆ ವೃತ್ಪತ್ತಿಯೂ ಬರೆಯಲ್ಪಟ್ಟಿದೆ. ಅದು ಗದ್ಯದಲ್ಲಿ

ಇದೆ. ಕನ್ನಡ ಭಾಷೆಯಲ್ಲಿ ಕರ್ನಾಟಕ ಶಬ್ದಶಾಸ್ತ್ರವನ್ನು ವಿಸ್ತಾರವಾಗಿ ಪ್ರತಿಪಾದಿಸುವಗ್ರಂಥವು ಇದೊಂದೇ. ಇದಕ್ಕೆ **ನಿಟ್ಟೂರ ಸಂಜಯ್ಯನು** ವ್ಯಾಖ್ಯಾನವನ್ನು ಬರೆದಿದ್ದಾನೆ.

ಕೇಶಿರಾಜನು ವ್ಯಾಕರಣದ ಫಲವನ್ನು ಬಹು ನಾರ್ಮಿಕವಾಗಿ ಹೇಳಿದ್ದಾನೆ.

**ವ್ಯಾಕರಣದಿಂದೆ ಪದವಾ। ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ। ಲೋಕಂ ತತ್ತ್ವಾಲೋಕದಿ। ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ॥**

ಮುಂದೆ ೧೬೦೪ರಲ್ಲಿ ಭಟ್ಟಾಕಳಂಕನು **ಶಬ್ದಾನುಶಾಸನವೆಂಬ** ಸುಪ್ರಸಿದ್ಧವಾದ ವ್ಯಾಕರಣ ಗ್ರಂಥವನ್ನು ಬರೆದನು ನಾಗವರ್ಮನ ಭಾಷಾ ಭೂಷಣದಂತೆ ಸಂಸ್ಕೃತದಲ್ಲಿ ರಚಿತವಾಗಿದೆ. ಭಾಷಾ ಭೂಷಣಕ್ಕಿಂತಲೂ ವಿಸ್ತಾರವಾಗಿಯೂ ಪ್ರೌಢವಾಗಿಯೂ ಇದೆ. ಶಬ್ದಮಣಿದರ್ಪಣಕ್ಕಿಂತಲೂ ಹೆಚ್ಚು ವಿಷಯಗಳನ್ನು ಒಳಗೊಂಡಿವೆ. ಕನ್ನಡ ಭಾಷೆಗೆ ಇದು ಅತ್ಯುತ್ತಮವಾದ ಕರಣಗ್ರಂಥವೆಂದು ಹೇಳಬಹುದು. ಇದರಲ್ಲಿ ೪ ಪಾದಗಳಿವೆ. ೫೯೨ ಸೂತ್ರಗಳಿವೆ. ಈ ಸೂತ್ರಗಳಿಗೆ, **ಭಾಷಾಮಂಜರಿ** ಎಂಬ ವೃತ್ತಿಯೂ **ಮಂಜರೀ ಮಕರಂದವೆಂಬ** ವ್ಯಾಖ್ಯಾನವೂ ಇದೆ. ವ್ಯಾಕರಣದ ಪ್ರಕ್ರಿಯೆಯ ದೃಷ್ಟಿಯಿಂದ ಇದೇ ಅತ್ಯಂತ ಪ್ರೌಢವೂ ಗೌರವಾರ್ಹವೂ ಆದ ಗ್ರಂಥ. ಆದರೆ ಪ್ರಯೋಗಗಳ ಪ್ರಾಮಾಣ್ಯದ ವಿಷಯದಲ್ಲಿ ಭಟ್ಟಾಕಳಂಕನಿಗಿಂತಲೂ ಕೇಶಿರಾಜನೇ ಹೆಚ್ಚು ವಿಶ್ವಾಸಾರ್ಹನು.

ಒಟ್ಟಿನಲ್ಲಿ ನೃಪತುಂಗನು ವ್ಯಾಕರಣಕ್ಕೆ ಸಂಬಂಧಪಟ್ಟ ಕೆಲವು ಮಾತುಗಳನ್ನು ಹೇಳಿದ್ದಾನೆ. ಆನುಪೂರ್ವಿಯಾಗಿ ಗ್ರಂಥರೂಪದಿಂದ ನಾಗವರ್ಮನು ಶಬ್ದಸ್ಮೃತಿ ಹಾಗು ಕರ್ನಾಟಕ ಭಾಷಾ ಭೂಷಣಗಳನ್ನು ರಚಿಸಿದ್ದಾನೆ. ಕೇಶಿರಾಜನು ಶಬ್ದಮಣಿದರ್ಪಣವನ್ನು ಬರೆದು ನಾಗವರ್ಮನ ದಾರಿಯನ್ನು ಮುಂದರಿಸಿದ್ದಾನೆ. ಭಟ್ಟಾಕಳಂಕನು ಶಬ್ದಾನುಶಾಸನವನ್ನು ಬರೆದು ವ್ಯಾಕರಣ ಶಾಸ್ತ್ರವನ್ನು ಪರಿಪೂರ್ತಿ-

ಗೊಳಿಸಿದ್ದಾನೆ ಮುಂದಿನ ಸಾಹಿತ್ಯವು ಹೊಸ ವೈಯಾಕರಣಿಗಳನ್ನು ಎದುರು ನೋಡುತ್ತಿದೆ.

## ಕನ್ನಡ ಛಂದಸ್ಸುಗಳು

ವ್ಯಾಕರಣವು ಸಾಹಿತ್ಯಕ್ಕೆ ತಳಹದಿಯಾದರೆ ಛಂದಸ್ಸು ಜೀವಾಳ ವಾಗಿದೆ. ವ್ಯಾಕರಣವು ಗದ್ಯಪದ್ಯಗಳೆರಡಕ್ಕೂ ಸಂಬಂಧಿಸಿದರೆ ಛಂದಸ್ಸು ಸಾಹಿತ್ಯದ ಜೀವನವಾದ ಕಾವ್ಯ (ಪದ್ಯ) ಕ್ಕೆ ಸಂಬಂಧಿಸಿದೆ. ಗಹನವಾದ-ವಿಸ್ತೃತವಾದ ವಿಚಾರಗಳನ್ನು ಸಂಗ್ರಹಿಸಿ, ಉದಾತ್ತವಾದ ವಿಷಯ ಗಳನ್ನು, ಲಲಿತವಾಗಿಯೂ ಮನೋಹರವಾಗಿಯೂ ರಸವತ್ತವಾಗಿಯೂ ಹೇಳಲು ಪದ್ಯವು ಬಹಳ ಅನುಕೂಲವು. ಸುಲಭವಾಗಿ ನೆನಪಿಡಲು ಪದ್ಯವು ಬಹು ಸಹಾಯಕವು. ಆದುದರಿಂದಲೇ ಪದ್ಯ ಸಾಹಿತ್ಯವೇ ಹೆಚ್ಚು. ಪದ್ಯಗಳ ನಿಯಮವನ್ನೇ ಛಂದಶ್ಶಾಸ್ತ್ರವು ಹೇಳುವುದು. ಛಂದಶ್ಶಾಸ್ತ್ರವು ಆ ಸಾಹಿತ್ಯದ ಒಳಗೋಲು ಇದ್ದಂತೆ.

ಕನ್ನಡ ಛಂದಶ್ಶಾಸ್ತ್ರಗಳ ಕಡೆಗೆ ಈ ದೃಷ್ಟಿಯಿಂದ ನೋಡಿದರೆ, ೧೧ನೇ ಶತಮಾನದ ವರೆಗೆ, ನಮಗೆ ಛಂದೋಗ್ರಂಥಗಳು ಕಾಣುವುದಿಲ್ಲ. ನಾಗವರ್ಮನ (೯೯೦) **ಛಂದೋಂಬುಧಿಯೇ** ಈಗ ದೊರೆತಿರುವ ಗ್ರಂಥ ಗಳಲ್ಲಿ ಅತಿ ಪ್ರಾಚೀನವು. ಕನ್ನಡ ಸಾಹಿತ್ಯಕ್ಕೂ ಇದು ಒಳ್ಳೇ ಕಾಲ. ಅದೇ ಹುಲುಸಾಗಿ ಬೆಳೆಯಲು ಪ್ರಾರಂಭವಾಗಿತ್ತು. ೯ನೆಯ ಶತಮಾನ ದಲ್ಲಿಯೇ 'ಗುಣಗಾಂಕಿಯಂ' ಎಂಬ ಛಂದೋಗ್ರಂಥವು ಉದಯ ವಾಗಿತ್ತೆಂದು 'ಯಾಪ್ಪರುಂಗಲಕ್ಕಾರಿಹೈ' ಎಂಬ ತಮಿಳು ಗ್ರಂಥದಿಂದ ತಿಳಿಯುತ್ತದೆ. ಆದರೆ ಆ ಗ್ರಂಥವು ಉಪಲಬ್ಧವಿಲ್ಲ. ಇದೇ ಶತಮಾನದ ಸುಪ್ರಸಿದ್ಧ ಲಕ್ಷಣ ಗ್ರಂಥಕಾರನಾದ ನೃಪತುಂಗನು ತನ್ನ ಕವಿರಾಜ-ಮಾರ್ಗದಲ್ಲಿ ಕನ್ನಡ ಛಂದಸ್ಸಿನ ಕೆಲವು ಮಾತುಗಳನ್ನು ಹೇಳುವನು. ಚಿತ್ತಾಣ, ಬೆದಂಡೆಗಳೆಂಬ ಕನ್ನಡ ಕಾವ್ಯಭೇದಗಳನ್ನು ವಿವರಿಸಿ, ಅವು ಗಳ ಲಕ್ಷಣಗಳನ್ನು ಹೇಳುವ ಮುಂದೆ ಕಂದ, ವೃತ್ತ, ಅಕ್ಕರ, ಚೌಪದ, ತಿವಿದಿ ಮೊದಲಾದ ದೇಶಿ ಪದ್ಯಗಳನ್ನು ಹೇಳುತ್ತಾನೆ. ಅದರಂತೆ ಕಾವ್ಯದ

ದೋಷವನ್ನು ಹೇಳುವಾಗ ಯತಿಯ ವಿಚಾರವಾಗಿಯೂ ವಿಚಾರ ಮಾಡುತ್ತಾನೆ.

ಆದರೆ ಆನುಪೂರ್ವಿಯಾಗಿ ಬರೆದ ಗ್ರಂಥವೆಂದರೆ ನಾಗವರ್ಮನ ಛಂದೋಂಬುಧಿಯೇ. ನಾಗವರ್ಮನು ತನ್ನ ಪೂರ್ವದ ಗುಣಗಾಂಕಿ ಮೊದಲಾದವರ ಯಾರ ಹೆಸರನ್ನೂ ಹೇಳದೆ,

" ಇಂದುಧರನುಮೆಗೆ ಪೇಳ್ದಾ ।
ಛಂದಂ ಪಿಂಗಳನಿನವನಿಯೊಳ್ ಪರಪಿದೊಡಾ ।
ಛಂದೋಂಬುರಾಶಿಯೊಳ್ ಮೊಗೆ ।
ತಂದದನಾತ್ಮೀಯನಾಕಿಗನುಸಿರ್ದಂ ॥

ಛಂದೋಂಬುಧಿ

ಎಂದು ಪಿಂಗಳನ ಹೆಸರನ್ನು ಹೇಳುತ್ತಾನೆ. ಈಶ್ವರನು ಉಮೆಗೆ ಉಪದೇಶಮಾಡಿದ ಛಂದಸ್ಸನ್ನು ಪಿಂಗಳನಿಂದ ಭೂಲೋಕದಲ್ಲಿ ವಿಸ್ತಾರ ವಾಯಿತೆಂದೂ ಅದನ್ನೇ ತಾನು ಅಭ್ಯಸಿಸಿ,ತನ್ನ ಹೆಂಡತಿಗೆ ಹೇಳಿದಂ ತೆಯೂ ಹೇಳುವನು. ಅಂದರೆ ಪಿಂಗಳನ ಛಂದೋಗ್ರಂಥದ ಆಧಾರ ದಿಂದಲೇ ಇವನು ಬರೆದನು. ಈ ಗ್ರಂಥವು ಆರು ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಪೀಠಿಕೆಯನಂತರ (೧) ಸಂಜ್ಞಾಧಿಕಾರದಲ್ಲಿ ಪ್ರಾಸ ಗಳ ವಿಷಯಗಳನ್ನು ಹೇಳುವನು. ನೃಪತುಂಗನ ಉದಾಹರಣ ಪದ್ಯ ಗಳನ್ನು ಉದಾಹರಿಸುವನು. ಭಾಷೆಯ ವಿಷಯದಲ್ಲಿ—

" ಸಂಸ್ಕೃತಂ ಪ್ರಾಕೃತಮಪಭ್ರಂಶಂ ಪೈಶಾಚಿಕಮೆಂಬ
ಮೂರುವರೆ ಭಾಷೆಗಳೊಳ್ ಪುಟ್ಟುವ ದಾ ವಿಡಾಂಧ್ರ ಕರ್ನಾಟಕಾದಿ
ಷಟ್‌ಪಂಚಾಶತ್ಸರ್ವ ವಿಷಯ ಭಾಷಾಜಾತಿಗಳಕ್ಕುಂ "

ಎಂದು ಹೇಳಿದ್ದಾನೆ. ಅನಂತರ ಕನ್ನಡಕ್ಕೆ ಅಸಾಧಾರಣವಾಗಿ ಇರುವ 'ಜಾತಿ'ಗಳನ್ನು—

"ಮದನವತಿಯಕ್ಕರಂ ಚೌ। ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ ।
ಟ್ಪದಿಯಕ್ಕರಿಕೆ, ಕರಂಚೆ । ಲ್ವೊದವಿದ ಛಂದೋವತಂ ಸಮುಬ್ಧಳಾಕ್ಷಿ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ.

(೨) **ಸಮವೃತ್ತಾವಿವರಣ**ವೆಂಬುದರಲ್ಲಿ ಉಕ್ತೆಯಿಂದ ಉತ್ಕೃತಿಯವರೆಗೆ ೨೬ ಛಂದಸ್ಸುಗಳನ್ನು ಹೇಳುತ್ತಾನೆ. ೩ನೆಯ ಆಶ್ವಾಸದಲ್ಲಿ ಇತರ ಸಮವೃತ್ತಗಳನ್ನೂ ಅರ್ಧ ಸಮವೃತ್ತ ವಿಷಮವೃತ್ತಗಳನ್ನೂ ಮಾತ್ರಾ ಛಂದಗಳನ್ನೂ ಮಾತ್ರಾ ಗಣಛಂದಗಳನ್ನೂ ಹೇಳಿದ್ದಾನೆ. ೪ನೆಯ ಆಶ್ವಾಸದಲ್ಲಿ ಇತರ ಮಾತ್ರಾ ಗಣಛಂದಗಳನ್ನೂ ೫ನೆಯದರಲ್ಲಿ **ಕನ್ನಡ** ಮಾತ್ರಾಛಂದಗಳನ್ನೂ, ೬ನೆಯದರಲ್ಲಿ ಷಟ್ ಪ್ರತ್ಯಯಗಳನ್ನೂ ವಿವರಿಸಿದ್ದಾನೆ. ಈ ಗ್ರಂಥದಲ್ಲಿ ಇರುವ ಈ ಅಲ್ಪ ಭಾಗವನ್ನು ಮಾತ್ರ **ಹಳಗನ್ನಡ** ಛಂದಸ್ಸಿಗೆ ಉಪಯೋಗಿಸಿರುವನು. ಮಿಕ್ಕುದೆಲ್ಲವೂ ಕೇವಲ ಸಂಸ್ಕೃತವೇ. ಇದು ಕನ್ನಡ ಸಾಹಿತ್ಯದ ಮೇಲಿನ ಸಂಸ್ಕೃತ ವರ್ಚಸ್ಸನ್ನು ಸೂಚಿಸುತ್ತದೆ. ಕನ್ನಡದ ಯಾವುದೇ ಛಂದೋಗ್ರಂಥವನ್ನು ನೋಡಿದರೂ ಸಂಸ್ಕೃತದ ಕೈಗಡದ ಛಂದಸ್ಸೂ ಕನ್ನಡ ಛಂದಸ್ಸೂ ಎರಡೂ ಕಾಣುತ್ತವೆ. ಇದಕ್ಕೆ ಕಾರಣವು ಇಲ್ಲದಿಲ್ಲ.

ಕನ್ನಡದ ಪ್ರಾಚೀನ ಕವಿಗಳೆಲ್ಲ ಸಂಸ್ಕೃತದಲ್ಲಿ ಪಾಂಡಿತ್ಯವುಳ್ಳವರಾಗಿ, ಸಂಸ್ಕೃತ ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳ ಮತ್ತು ಮಹಾಕಾವ್ಯ, ನಾಟಕಗಳ ಪ್ರಭಾವಕ್ಕೆ ಒಳಗಾಗಿ, ಅವುಗಳನ್ನೇ ತಮ್ಮ ಗುರಿಯನ್ನಾಗಿ ಇಟ್ಟುಕೊಂಡು, ಸಂಸ್ಕೃತ ಶೈಲಿಯಲ್ಲಿಯೇ ಚಂಪೂಕಾವ್ಯಗಳನ್ನು ಬರೆದಂತೆ, ಸಂಸ್ಕೃತ ಛಂದಸ್ಸನ್ನೇ ತಮ್ಮ ಕಾವ್ಯಗಳಲ್ಲಿ ಪ್ರಧಾನವಾಗಿ ಉಪಯೋಗಿಸಿಕೊಂಡರು.

ಕನ್ನಡಕ್ಕೆ ಆದಿಕವಿಯಾದ ಪಂಪನ ಆದಿಪುರಾಣ, ವಿಕ್ರಮಾರ್ಜುನ ವಿಜಯ ಈ ಎರಡೂ ಗ್ರಂಥಗಳಲ್ಲಿಯೂ ಸಂಸ್ಕೃತ ಛಂದಸ್ಸಿಗೇ ಪ್ರಾಧಾನ್ಯವೇ ಹೊರ್ತು ಕನ್ನಡಕ್ಕಲ್ಲ. ಕನ್ನಡದ ಎಲ್ಲ ಚಂಪೂಕಾರರು ಇದೇ ಕಿತ್ತೆಯನ್ನೇ ತುಳಿದಿರುವರು. ಅರ್ಥಾತ್ ಸಂಸ್ಕೃತ ಛಂದಸ್ಸನ್ನೇ ಹೆಚ್ಚಾಗಿ ಬಳಸಿರುವರು. ಮುಖ್ಯವಾಗಿ ಹೀಗೆ ತೆಗೆದುಕೊಂಡ ಸಂಸ್ಕೃತ ಛಂದಸ್ಸು ತನ್ನ ವರ್ಚಸ್ಸನ್ನು ಕೂಡಿಸುವದು ಸ್ವಾಭಾವಿಕವಿದೆ.

ಸಂಸ್ಕೃತ ಛಂದಸ್ಸು **ವೈದಿಕ, ಲೌಕಿಕ** ಎಂದು ಎರಡು ಬಗೆಯಾಗಿವೆ. ವೇದಗಳಲ್ಲಿ ಬಳಸಿರುವ ಛಂದಸ್ಸೇ **ವೈದಿಕ ಛಂದಸ್ಸು.**

ಇದನ್ನು ಕನ್ನಡ ಕವಿಗಳು ಬಳಸಿದಂತೆ ಕಾಣುವದಿಲ್ಲ. ಆದರೆ ಲೌಕಿಕ ಛಂದಸ್ಸನ್ನು ಉಪಯೋಗಿಸಿಕೊಂಡಿರುವರು. "ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ದರೆ, ಮಹಾ ಸ್ರಗ್ಧರೆ, ಮತ್ತು ಕಂದ' ಗಳನ್ನೂ ಇವುಗಳ ಜೊತೆಯಲ್ಲಿಯೇ ಅಲ್ಲಲ್ಲಿ ಅಪೂರ್ವವಾಗಿ, "ಮಾಲಿನಿ, ಪೃಥ್ವಿ, ಶಿಖರಿಣಿ, ಮಂದಾಕ್ರಾಂತ, ಹರಿಣಿ, ಮಲ್ಲಿಕಾಮಾಲೆ, ತರಳ" ಮುಂತಾದ ವೃತ್ತಗಳನ್ನೂ ಅದರಂತೆಯೇ 'ಉಪೇಂದ್ರವಜ್ರ, ಇಂದ್ರವಜ್ರ, ವಂಶಸ್ಥ, ವಸಂತತಿಲಕ' ಮುಂತಾದವು ಗಳನ್ನೂ ಅತ್ಯಂತ ವಿರಳವಾಗಿಯೂ ಉಪಯೋಗಿಸಿದ್ದಾರೆ. ಆದರೆ ಶಾರ್ದೂಲ ಮೊದಲಾದ ವೃತ್ತಗಳ ಪ್ರಚಾರವೇ ಬಹಳ. ಈ ವೃತ್ತಗಳನ್ನು ಕೂಡ ಕನ್ನಡಕ್ಕ ತೆಗೆದುಕೊಳ್ಳುವಾಗ ಕನ್ನಡ ಭಾಷೆಗೆ ತಕ್ಕಂತೆ ಕುಲ ಗೆಡಿಸಿದುದು ಕಾಣುತ್ತದೆ. ಈ ವೃತ್ತಗಳು ಲಿಂಗವಂತನಾದ ಬ್ರಾಹ್ಮಣ ನಂತೆ, ಯತಿಯನ್ನು ಕಳೆದುಕೊಂಡು, ಪ್ರಾಸವನ್ನು ಧಾರಣಮಾಡಿದುವು. ಸಂಸ್ಕೃತದ ಆರ್ಯಾ ಅಥವಾ ಗಾಥಾವೇ ಕನ್ನಡದಲ್ಲಿ ಕಂದವಾಗಿದೆ.

ಕನ್ನಡ ಸಾಹಿತ್ಯವು ಹಳಗನ್ನಡ ರೂಪವನ್ನು ಬಿಟ್ಟು, ನಡುಗನ್ನಡ ರೂಪವನ್ನು ಧಾರಣ ಮಾಡಿದಂತೆ, ಅಂದರೆ ಸಂಸ್ಕೃತ ಧಾಟಿಯನ್ನು ಬಿಟ್ಟು ಕನ್ನಡ ಧಾಟಿಯಲ್ಲಿ ನಡೆದಂತೆ, ಹಳಗನ್ನಡದ ಮಿಶ್ರಣವಿಲ್ಲದೆ ವೃತ್ತ ಕಂದಗಳನ್ನು ರಚಿಸುವುದು ಕಷ್ಟವಾಗುತ್ತ ಬಂದಿತು. ಸಂಸ್ಕೃತ ಛಂದಸ್ಸು ಕನ್ನಡಕ್ಕೆ ಸಹಜವಾಗಿ ಒಗ್ಗುವದಿಲ್ಲೆಂದು ಅನಿಸಹತ್ತಿತು. ಆಗ ಅಂತರ್ಮುಖಿಗಳಾಗಿ ತಮ್ಮದೊಂದು ವಿಶಿಷ್ಟವಾದ ಛಂದಸ್ಸು ಇದೆಯೇ, ಇದ್ದರೆ ಯಾವುದು ಎಂಬ ಶೋಧಕ್ಕೆ ಮೊದಲಾಯಿತು. ೧೧ನೆಯ ಶತಮಾನದ ವರೆಗಿನ ಕವಿಗಳು **ಕನ್ನಡ ಛಂದಸ್ಸಿನ** ಪದ್ಯಗಳನ್ನು ಅಲ್ಲೊಂದು ಇಲ್ಲೊಂದು ಉಪಯೋಗಿಸುತ್ತಿದ್ದರು. ಅದನ್ನೇ ನಾಗ ವರ್ಮನು ತನ್ನ ಛಂದೋಂಬುಧಿಯಲ್ಲಿ ಸಂಗ್ರಹಿಸಿ ಹೇಳಿದ್ದಾನೆ:

(೧) **ತ್ರಿಪದಿ,** (೨) **ಅಕ್ಕರ,** (೩) **ರಗಳೆ,** (೪) **ಸಾಂಗತ್ಯ,** (೫) **ಷಟ್ಪದಿ,** ಇವೇ ಆ ಕನ್ನಡ ಪದ್ಯಗಳು. ಇವೇ ನಿಜವಾದ **ಕನ್ನಡ ಭಾಷೆಯ, ಕನ್ನಡ ಜನಾಂಗದ ಛಂದಸ್ಸೆಂದೂ** ಜನಪದಸಾಹಿತ್ಯ

ವೆಲ್ಲವೂ ಇದೇ ಛಂದಸ್ಸುಗಳಲ್ಲಿದೆಯೆಂದೂ ಮನಗಂಡು ಕ್ರಾಂತಿಕಾರಕರಾದ ವೀರಶೈವ ಕವಿಗಳು ಸಂಸ್ಕೃತ ಛಂದಸ್ಸನ್ನು ಹಿಂದಕ್ಕಟ್ಟಿ ಕನ್ನಡ ಛಂದಸ್ಸನ್ನೇ ಮುಂದುಮಾಡಿದರು.

ನಾಗವರ್ಮನು ಶರಷಟ್ಪದಿಯೊಂದನ್ನೇ ಹೇಳುತ್ತಾನೆ. ೧೨ನೆಯ ಶತಮಾನದಲ್ಲಿ ಷಟ್ಪದಿಗೆ ಕವಲೊಡೆದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದು ಆರು ಬಗೆಯಾಯಿತು. ಹಿಂದೆ ಈ ವಿಷಯವನ್ನು ವಿಸ್ತಾರವಾಗಿ ವಿವರಿಸಿದ್ದೇವೆ. ಅಂತೂ ಕನ್ನಡ ಸಾಹಿತ್ಯವು ೧೨ನೆಯ ಶತಮಾನದಿಂದ **ಕನ್ನಡ ಛಂದಸ್ಸಿನ ಕುಣಿತದಿಂದ** ಮುಂದರಿಯಿತು. ಕನ್ನಡ ಛಂದಸ್ಸು ತ್ರಿಪದಿ, ೫ ಅಕ್ಕರಗಳು, ೬ ಷಟ್ಪದಿಗಳು, ರಗಳೆಗಳು, ಸಾಂಗತ್ಯ, ದ್ವಿಪದಿ, ಚೌಪದಿ, ಸೀಸಪದ್ಯ ಹೀಗೆ ವಿವಿಧ ರೂಪಗಳನ್ನು ತಾಳಿತು. ಇಂತಿದೆ ಕನ್ನಡ ಛಂದಸ್ಸಿನ ಇತಿಹಾಸ

ನಾಗವರ್ಮನ ತರುವಾಯ ಹೊರಟ ಛಂದೋಗ್ರಂಥವೆಂದರೆ ಈಶ್ವರ (೧೫೦೦) ಕವಿಯ **ಕವಿಜಿಹ್ವಾಬಂ ನ**. ಇದು ಕಂದವೃತ್ತಗಳಲ್ಲಿದೆ. ಇದರಲ್ಲಿ ನಾಲ್ಕು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದಲ್ಲಿ ಗಣಗಳೂ ಅವುಗಳ ವರ್ಣ, ವಾಹನ, ಮೈತ್ರಿ, ವೈರ, ಕುಲ, ದೇವತಾ ಫಲಾದಿಗಳನ್ನು ಹೇಳಿದ್ದಾನೆ. ಎರಡನೆಯದರಲ್ಲಿ ಪ್ರಾಸವಿವರಗಳನ್ನು ಹೇಳಿದ್ದಾನೆ. ಮೂರನೆಯದರಲ್ಲಿ ಅಕ್ಷರಗಳೂ ಅವುಗಳ ಕುಲ, ಅಧಿದೇವತೆ ಮೊದಲಾದ ವಿಷಯಗಳೂ ಹೇಳಲ್ಪಟ್ಟಿವೆ. ಕೊನೆಯದರಲ್ಲಿ ಭಾವ, ಅಲಂಕಾರ, ಕಂದ, ಷಟ್ಪದಿಗಳ ಲಕ್ಷಣ ಮುಂತಾದವುಗಳು ಹೇಳಲ್ಪಟ್ಟಿವೆ.

ಮುಂದೆ ೧೬೫೦ರಲ್ಲಿ ಗುಣಚಂದ್ರನು **ಛಂದಸ್ಸಾರ**ವೆಂಬ ಗ್ರಂಥವನ್ನು ಬರೆದನು. ಸಂಜ್ಞಾ, ಮಾತ್ರಾಛಂದೋಲಕ್ಷಣ, ಸಮವೃತ್ತ, ಸಂಕೀರ್ಣ, ತಾಳವೃತ್ತ ಪ್ರಕರಣಗಳೆಂದು ಐದು ಭಾಗವಾಗಿ ಗ್ರಂಥವು ವಿಸ್ತರಿಸಲ್ಪಟ್ಟಿದೆ.

ಮುಂದೆ ೧೮೦೦ನೆಯ ಇಸ್ವಿಯಲ್ಲಿ ಪ್ರಾಸ, ವೃತ್ತಗಳ ಲಕ್ಷಣಗಳನ್ನು ಹೇಳುವ **ನಂದೀಛಂದಸ್ಸು** ಎಂಬುದು ಪ್ರಸಿದ್ಧವಾಗಿದೆ. ನಾಗ

ವರ್ಮನ **ಛಂದೋಂಬುಧಿಯೂ** ಗುಣಚಂದ್ರನ **ಛಂದಸ್ಸಾರವೂ** ಕನ್ನಡದಲ್ಲಿ ಪ್ರಸಿದ್ಧವಾದ ಛಂದಸ್ಸುಗಳು.

## ಅಲಂಕಾರ

**ಸವಿಶೇಷ ಶಬ್ದರಚನಂ ।**
**ವಿವಿಧಾರ್ಥ ವ್ಯಕ್ತಿ ವರ್ತಿತಾಲಂಕಾರಂ.॥**

—ಕವಿರಾಜಮಾರ್ಗ, ೧, ೨೨

ಭಾಷೆಯು ಬೆಳೆದು ವಿವಿಧ ರೂಪ ತಾಳಿದಂತೆ, ಅದರ ಸ್ವರೂಪ, ನಿಯಮಗಳನ್ನು ತಿಳಿಸುವ ವ್ಯಾಕರಣ ಛಂದಸ್ಸುಗಳು ಉದಯವಾಗುವಂತೆ, ಭಾಷೆಯು ಬೆಳೆದ ನಂತರವೇ ಅಲಂಕಾರ ಗ್ರಂಥಗಳೂ ಹುಟ್ಟುತ್ತವೆ. ಇದು ಸಹಜ ಧರ್ಮ. ಈ ಧರ್ಮಕ್ಕನುಸರಿಸಿಯೆ ನಮ್ಮಲ್ಲಿಯೂ ಅನೇಕ ಕಾವ್ಯಗಳು ಹುಟ್ಟಿ ಬೆಳೆದ ನಂತರವೇ ಅಲಂಕಾರ ಗ್ರಂಥಕ್ಕೆ ಪ್ರಾರಂಭವಾಗಿರಬೇಕು. ಆದರೆ, ಈಗ ನಮಗೆ ದೊರೆತಿರುವ ಪ್ರಾಚೀನತಮವಾದ ಮೊದಲನೇ ಗ್ರಂಥವೇ **ಲಕ್ಷಣಗ್ರಂಥ**ವಾಗಿದೆ ಅಂದರೆ, ಅದಕ್ಕಿಂತಲೂ ಮೊದಲು ಎಷ್ಟೋ ಕಾಲ ಕಾವ್ಯವು ಬೆಳೆದುಬಂದಿರಲೇ ಬೇಕು.

ಸಾಹಿತ್ಯದಲ್ಲಿ ಅಲಂಕಾರವೆಂದರೆ ನೃಪತುಂಗನು ಹೇಳುವಂತೆ, ಅನುಪ್ರಾಸ, ರೂಪಕ, ಉಪಮೆ ಮುಂತಾದ ಶಬ್ದವೈಚಿತ್ರ್ಯಗಳೆಂದರ್ಥ. ಕವಿಗಳು ತಮ್ಮ ಬುದ್ಧಿಕೌಶಲದಿಂದ, ವಿವಿಧ ಭಾವಗಳಿಂದ ಕಾವ್ಯವನ್ನು ಸೊಬಗುಗೊಳಿಸಿ ಅಲಂಕರಿಸುವರು. ಅಂದರೆ ಕವಿಗಳ ಈ ಕುಸುರೇ ಅರ್ಥಾತ್ ಸೊಬಗೇ **ಅಲಂಕಾರವು**. ಇದನ್ನು ವಿವರಿಸುವದೇ ಅಲಂಕಾರ ಶಾಸ್ತ್ರವು. ಈ ಶಾಸ್ತ್ರದ ಮೇಲ್ಮೆಯು ಸಾಹಿತ್ಯದ ಪರಿಪೂರ್ಣತೆಯನ್ನು ಸೂಚಿಸುವುದು. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯದಲ್ಲಿಯ ಅಲಂಕಾರ ಗ್ರಂಥಗಳ ಕಡೆಗೆ ನೋಡೋಣ.

ಕನ್ನಡದಲ್ಲಿರುವ ಅಲಂಕಾರ ಗ್ರಂಥಗಳೆಲ್ಲವೂ ಸಂಸ್ಕೃತದ ಅನು-

ಕರಣ, ಇಲ್ಲವೆ ಛಾಯೆಗಳಾಗಿವೆ ಎಂಬುದು ಒಮ್ಮೆಲೆ ಒಡೆದು ಕಾಣು ತ್ತದೆ. -ನೆಯ ಶತಮಾನದ ಸಮಯಕ್ಕೆ ಸಂಸ್ಕೃತ ಸಾಹಿತ್ಯದ ಪ್ರಭಾ ವವು ಕನ್ನಡವನ್ನು ಹೇಗೆ ಆವರಿಸಿತ್ತೆಂಬುದನ್ನು ಹಿಂದೆಯೆ ಅನೇಕ ಸಲ ಹೇಳಿದ್ದೇವೆ. ಈ ಸಂಸ್ಕೃತದ ಬೆಳಕಿನಲ್ಲಿಯೆ ನಮ್ಮ ಲಕ್ಷಣಕಾರರು ಗ್ರಂಥಗಳನ್ನು ರಚಿಸಿರುವರು. ಅದು ಮುಂದಣ ಚರಿತ್ರೆಯಿಂದ ಸ್ಪಷ್ಟ ವಾಗುವದು.

ಸಾಹಿತ್ಯದಲ್ಲಿ 'ಅಲಂಕಾರ'ವೆಂದರೆ ಅನುಪ್ರಾಸ, ಉಪಮೆ ಮುಂ ತಾದ ಶಬ್ದಾರ್ಥ ವೈಚಿತ್ರ್ಯಗಳೆಂದು ಒಂದು ಅರ್ಥ. ಕಾವ್ಯದಲ್ಲಿರುವ ಸೌಂದರ್ಯವೆಂದು ಇನ್ನೊಂದು ಅರ್ಥ. ಅಲಂಕಾರ ಶಾಸ್ತ್ರವು ಶಬ್ದ ವೈಚಿತ್ರ್ಯವನ್ನೂ ಅರ್ಥವೈಚಿತ್ರ್ಯವನ್ನೂ ಸೌಂದರ್ಯತತ್ವವನ್ನೂ ವಿಚಾರ ಮಾಡುವ ಶಾಸ್ತ್ರ. ಶಬ್ದವೈಚಿತ್ರ್ಯಗಳು ಕಾವ್ಯಕ್ಕೆ ಸೌಂದರ್ಯ ದಾಯಕವಾಗಿರುವದರಿಂದ ಕಾವ್ಯದ ಸ್ವರೂಪ, ಲಕ್ಷಣ ಮುಂತಾದವು ಗಳನ್ನೂ ಅದಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ನಿರೂಪಿಸುವ ಶಾಸ್ತ್ರವೆಂದು ಹೇಳಬಹುದು. ಆದುದರಿಂದಲೆ ಮೊದಲಿನ ಅಲಂಕಾರ ವಿದರು ಕಾವ್ಯದಲ್ಲಿ ಶಬ್ದಾಲಂಕಾರಗಳಿಗೆ ಪ್ರಾಧಾನ್ಯ ಕೊಟ್ಟಿದ್ದರೆಂದೂ ಅದರಿಂದ ಕಾವ್ಯ ಲಕ್ಷಣವನ್ನು ಬೋಧಿಸುವ ಶಾಸ್ತ್ರಕ್ಕೆ 'ಅಲಂಕಾರ ಶಾಸ್ತ್ರ'ವೆಂದು ಹೆಸರು ಬಂದಿತೆಂದೂ ಕೆಲವರ ಮತ. ಇವರ ಮತದಂತೆ ಕಾವ್ಯದಲ್ಲಿ ವಾಚ್ಯಾರ್ಥಕ್ಕೇ ಪ್ರಾಧಾನ್ಯ. ವ್ಯಂಗ್ಯಾರ್ಥವಿದ್ದರೆ, ವಾಚ್ಯಾರ್ಥವನ್ನು ಪುಷ್ಟಿಗೊಳಿಸುವದರ ಮೂಲಕ ಅದಕ್ಕೆ ಎರಡನೇ ಸ್ಥಾನ. 'ರೀತಿಃ ಆತ್ಮಾ ಕಾವ್ಯಸ್ಯ' ಎಂಬ ವಾಮನನ ಉಕ್ತಿಯಂತೆ ರೀತಿಯೇ ಕಾವ್ಯಕ್ಕೆ ಆತ್ಮಾ, ಗುಣಾಲಂಕಾರಗಳು ಮುಖ್ಯ, ಈ ಪಕ್ಷ ದವರಿಗೆ.

ಎರಡನೆಯ ಪಂಗಡದವರ ಮತಾನುಸಾರವಾಗಿ, ಧ್ವನಿ ಅಥವಾ ವ್ಯಂಗ್ಯಾರ್ಥಕ್ಕೆ ಪ್ರಾಧಾನ್ಯ. ರಸವೇ ಕಾವ್ಯಕ್ಕೆ ಜೀವ. ರಸಪುಷ್ಟಿ- ಯನ್ನುಂಟುಮಾಡುವದರ ಮೂಲಕವೆ ಗುಣಾಲಂಕಾರಗಳಿಗೆ ಪ್ರಾಶಸ್ತ್ಯ. ಈ ಎರಡೂ ಮತಗಳನ್ನು ಅಲಂಕಾರಪ್ರಧಾನ ಹಾಗು ರಸಪ್ರಧಾನ

ವೆಂದು ವಿಭಾಗಿಸಬಹುದು. ಈ ಕ್ರಮದಲ್ಲಿಯೇ ಈ ಶಾಸ್ತ್ರದ ಬೆಳವಣಿಗೆಯೂ ಆಗಿದೆ.

ಅಲಂಕಾರ ಪ್ರಧಾನರಿಗೆ ರಸ, ಧ್ವನಿಗಳ ಜ್ಞಾನವು ಇರಲಿಲ್ಲವೆಂದು ಯಾರೂ ತಿಳಿಯಕೂಡದು. ಆದರೆ ಅವರು ಇವುಗಳಿಗೆ ಮಹತ್ವ ಕೊಡದೆ ಅಲಂಕಾರಗಳಲ್ಲಿಯೇ ಸೇರಿಸಿಬಿಟ್ಟಿರುವರು. ನೃಪತುಂಗನು† 'ಧ್ವನಿ ಎಂಬುದು ಅಲಂಕಾರಂ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಅಂದರೆ ಇದಕ್ಕೆ ಪ್ರಾಮುಖ್ಯತೆ ಇರಲಿಲ್ಲವೆಂಬರ್ಥ. ಭರತನ ನಾಟ್ಯಶಾಸ್ತ್ರದಲ್ಲಿಯ ಮಾತ್ರ ರಸವಿಚಾರವು ಹೆಚ್ಚಾಗಿ ಹೇಳಲ್ಪಡುತ್ತದೆ. ಉಳಿದ‡ ಪ್ರಾಚೀನ ಲಕ್ಷಣ ಗ್ರಂಥಗಳಲ್ಲಿ ಇದು ಕಾಣುವದಿಲ್ಲ ಇದನ್ನು ನೋಡಿದರೆ ನಾಟಕದಲ್ಲಿಯೇ ರಸಕ್ಕೆ ಪ್ರಾಧಾನ್ಯವಿತ್ತೆಂದೂ* ಮುಂದೆ ೯ನೆಯ ಶತಮಾನದಲ್ಲಿ ಅದನ್ನು ಕಾವ್ಯಕ್ಕೆ ಅಪ್ಪಯಿಸಿದಂತೆಯೂ ಕಾಣುತ್ತದೆ.

ಸಂಸ್ಕೃತದಲ್ಲಿ ಅಲಂಕಾರಕಾರರೂ, ರಸಕಾರರೂ ಇರುವಂತೆ, ಕನ್ನಡ ಲಕ್ಷಣಕಾರರಲ್ಲಿಯೂ ಎರಡು ಬಣಗಳು ಕಾಣುತ್ತವೆ. ಮೊದಲು **ಅಲಂಕಾರರ** ವಿಷಯವನ್ನೇ ನೋಡೋಣ.

ಕನ್ನಡ ಸಾಹಿತ್ಯಕ್ಕೆ ಕವಿರಾಜಮಾರ್ಗವು ನಿಜವಾಗಿಯೂ ರಾಜಮಾರ್ಗವು. ಕನ್ನಡ ಸಾಹಿತ್ಯದ ವಿಷಯಕ್ಕೆ ಯಾವುದೆ ಮಾತನ್ನು ಎತ್ತಿದರೂ ಅದರ ಬೇರುಗಳೆಲ್ಲವೂ ಕವಿರಾಜಮಾರ್ಗದಲ್ಲಿ ದೊರೆಯುತ್ತವೆ. ವ್ಯಾಕರಣ, ಛಂದಸ್ಸು, ಕನ್ನಡ ಪ್ರಾಚೀನತೆ, ದೇಶ, ಜನತೆ ಇವೆಲ್ಲವುಗಳ ಸುಳುವನ್ನೂ ಹೇಳುವ ಈ ಗ್ರಂಥವು ಕನ್ನಡ ಸಾಹಿತ್ಯದ **ತಾಯಿಬೇರು.** ಕನ್ನಡಿಗರ ಕೈದೀವಟಿಗೆ. ಕವಿರಾಜಮಾರ್ಗವು ಕನ್ನಡದ **ಮೊದಲನೇ ಲಕ್ಷಣಗ್ರಂಥ**ವೆಂದು ಪ್ರಸಿದ್ಧವಾಗಿದೆ.

ಈ ಗ್ರಂಥವು (೮೧೪-೮೭೭) **ದಂಡಿಯ** 'ಕಾವ್ಯಾದರ್ಶ'ದ ಅನು

---

† ಕವಿರಾಜಮಾರ್ಗ ೩ನೆಯ ಆಶ್ವಾಸ; ೨೦೮ನೆಯ ಶ್ಲೋಕ.

‡ ಕೈಪಿಡಿ, ಪು. ೧೯೬.

* ೯ನೆಯ ಶತಮಾನದ ಮೊದಲಿನ ಲಕ್ಷಣಕಾರರಿಗೆ ಪ್ರಾಚೀನರೆಂದು ಕೈಪಿಡಿಕಾರರು ಮಾಡಿದ್ದಾರೆ, ಪು. ೧೯೪.

ವಾದವೆಂದೇ ಹೇಳಬಹುದು. ಇದು ಮೂರು ಪರಿಚ್ಛೇದಗಳಾಗಿ ವಿಭಾಗಿಸಲ್ಪಟ್ಟಿದೆ. (೧) ದೋಷಾನುವರ್ಣನ ನಿರ್ಣಯ, (೨) ಶಬ್ದಾಲಂಕಾರ, (೩) ಅರ್ಥಾಲಂಕಾರ. ದೇವತಾ ಸ್ತೋತ್ರವನ್ನು ಮಾಡಿದ ನಂತರ ಕವಿಗಳನ್ನೂ ಕಾವ್ಯಗಳನ್ನೂ ಹೊಗಳುತ್ತಾನೆ. ಗದ್ಯ ಪದ್ಯ ಕಾವ್ಯಗಳ ಲಕ್ಷಣವನ್ನು ಹೇಳಿ, ಅವುಗಳಿಗೆ ಲಕ್ಷ್ಯರೂಪವಾಗಿ ಕಾವ್ಯಗಳನ್ನು ಬರೆದಿರುವ ಸಂಸ್ಕೃತದ ಬಾಣ, ನಾರಾಯಣ, ಗುಣಸೂರಿ, ಭಾರವಿ, ಕಾಳಿದಾಸ, ಮಾಘಾದಿಗಳನ್ನೂ ವಿಮಳೋದಯ, ನಾಗಾರ್ಜುನಾದಿ ಕನ್ನಡ ಕವಿಗಳನ್ನೂ ಹೊಗಳುತ್ತಾನೆ. ಆಮೇಲೆ ಕನ್ನಡ ಭಾಷೆಯ ನಾಡನ್ನು ಸೂಚಿಸಿ, ತನ್ನ ಕಾಲದಲ್ಲಿ ಹಳಗನ್ನಡವೆಂಬ ಭಾಷೆಯಿದ್ದಿತೆಂದೂ ಕನ್ನಡದಲ್ಲಿ ದಕ್ಷಿಣೋತ್ತರಗಳೆಂಬ ಎರಡು ಶೈಲಿಗಳಿದ್ದುವೆಂದೂ ಹೇಳಿ, 'ಬೆದಂಡೆ, ಚತ್ತಾಣ'ಗಳೆಂಬ ಕಾವ್ಯಭೇದಗಳನ್ನು ತೋರಿಸುತ್ತಾನೆ. ನಂತರ ಕಾವ್ಯದೋಷಗಳನ್ನು ವಿವರಿಸಿ, ಮೊದಲನೇ ಪರಿಚ್ಛೇದವನ್ನು ಮುಗಿಸುತ್ತಾನೆ. ಕನ್ನಡದ ಅನೇಕ ಸಂಗತಿಗಳನ್ನು ತೋರಿಸುವದೇ ಇದರ ವೈಶಿಷ್ಟ್ಯ. ಎರಡನೇ ಪರಿಚ್ಛೇದದಲ್ಲಿ ಕನ್ನಡದಲ್ಲಿ ಬರೆಯುವದಕ್ಕೆ ಕಷ್ಟವಾದ ಏಕಾಕ್ಷರ, ದ್ವ್ಯಕ್ಷರ ಶ್ಲೋಕಗಳಿಗೂ, ಚಿತ್ರ, ಯಮಕಾದಿಗಳಿಗೂ ಉದಾಹರಣೆಗಳನ್ನು ಕೊಟ್ಟು **ಶಬ್ದಾಲಂಕಾರ**ವನ್ನು ವರ್ಣಿಸುತ್ತಾನೆ. ಮೂರನೆಯದರಲ್ಲಿ ಸುಮಾರು ೩೬ ಅಲಂಕಾರಗಳಿಗೆ ಲಕ್ಷ್ಯಲಕ್ಷಣಗಳನ್ನು ಹೇಳಿ **ಅರ್ಥಾಲಂಕಾರ**ವನ್ನು ವರ್ಣಿಸುತ್ತಾನೆ.

ಕನ್ನಡ ಅಲಂಕಾರ ಗ್ರಂಥಗಳಲ್ಲೆಲ್ಲ, ಅತ್ಯಂತ ವಿಸ್ತಾರವಾದ ಗ್ರಂಥವೆಂದರೆ ನಾಗವರ್ಮನ **ಕಾವ್ಯಾವಲೋಕನ** (೧೧೪೫). ಇದೇ ಎರಡನೇ ಗ್ರಂಥವು. ಇದರ ಮೇಲ್ಮೆಯನ್ನು ಕವಿಯು ಹೀಗೆ ಹೇಳಿದ್ದಾನೆ:—

> **ಕವಿಗಳಿಗಿದು ಕೈಗನ್ನಡಿ । ಕವಿತೆಗೆ ಬಾಳ್ಮೊದಲುದಾತ್ತ ವಾಗ್ದೇವತೆಗು ॥**
> **ಧ್ರುವ ಹೇತು ಕೋಶಗ್ರಹಮೆನೆ । ಭುವನದೊಳಿದು ಪರಿದು**
> **ನಿಲ್ವುದೊಂದಚ್ಚರಿಯೋ ॥**

ಈ ಗ್ರಂಥಕ್ಕೆ ವಾಮನ, ರುದ್ರಟ, ಭಾಮಹ, ದಂಡಿ, ಭರತ, ರಾಜಶೇಖರ ಇವರ ಗ್ರಂಥಗಳೇ ಆಧಾರಗಳು. (೧) ಶಬ್ದಸ್ಮೃತಿ,

(೨) ಕಾವ್ಯಮಲವ್ಯಾವೃತ್ತಿ, (೩) ಗುಣವಿಶೇಷ, (೪) ರೀತಿ ಕ್ರಮ ರಸನಿರೂಪಣ, (೫) ಕವಿಸಮಯ, ಎಂದು ಇದರಲ್ಲಿ ಐದು ಅಧಿಕರಣ ಗಳಿವೆ.

ಮೊದಲನೆಯದರಲ್ಲಿ ವ್ಯಾಕರಣವು ನಿರೂಪಿಸಲ್ಪಟ್ಟಿದೆ. ಎರಡನೆಯ ದರಲ್ಲಿ ಪದಪದಾರ್ಥ ಸಂಧಿದೋಷ ನಿಶ್ಚಯ, ವಾಕ್ಯವಾಕ್ಯಾರ್ಥ ದೋಷಾನುಕೀರ್ತನ ಎಂಬ ಎರಡು ವಿಭಾಗಗಳಿವೆ. ಮೂರನೆಯದರಲ್ಲಿ ಮಾರ್ಗವಿಭಾಗದರ್ಶನ, ಶಬ್ದಶಬ್ದಾಲಂಕಾರ ನಿರ್ಣಯ, ಅರ್ಥಾಲಂಕಾರ ನಿರ್ಣಯಗಳೆಂಬ ಮೂರು ಪ್ರಕರಣಗಳಿವೆ. ೪ನೆಯ ಅಧಿಕರಣದಲ್ಲಿ ಅಸದಖ್ಯಾತಿ, ಸದಕೀರ್ತನೆ, ನಿಯಮಾರ್ಥ, ಐಕ್ಯವೆಂಬ ನಾಲ್ಕು ಪ್ರಕರಣ ಗಳಿವೆ. ಈ ಗ್ರಂಥವು ಇಷ್ಟು ವಿಸ್ತಾರವಾಗಿ ವಿವರಿಸಲ್ಪಟ್ಟಿದ್ದರೂ ಕವಿಯು ಧ್ವನಿಯ ಪ್ರಸ್ತಾಪವನ್ನು ಎತ್ತಿಲ್ಲ.

ನಾಗವರ್ಮನ ನಂತರ ಲಕ್ಷಣಗ್ರಂಥಕಾರನೆಂದರೆ, ಉದಯಾದಿ-ತ್ಯನು (೧೧೫೦). ಇವನ ಗ್ರಂಥವು **ಉದಯಾದಿತ್ಯಾಲಂಕಾರ.** ಇದು ಚಿಕ್ಕ ಗ್ರಂಥ. ಇದರಲ್ಲಿ ೭೨ ಪದ್ಯಗಳಿವೆ. (೧) ಕಾವ್ಯಭೇದ, (೨) ರೀತಿ, (೩) ರಸ, (೪) ಕಾವ್ಯಗುಣಗಳು, (೫) ಅಲಂಕಾರಗಳು ಎಂದು ಐದು ಭಾಗಗಳಿವೆ. ಇವುಗಳ ಲಕ್ಷಣಗಳನ್ನು ಕ್ರಮವಾಗಿ ಹೇಳಿದ್ದಾನೆ. 'ಚಂದ್ರಾಲೋಕ'ವೆಂಬ ಸಂಸ್ಕೃತ ಲಕ್ಷಣಗ್ರಂಥದಂತೆಯೇ ಲಕ್ಷ್ಯ ಲಕ್ಷಣಗಳನ್ನು ಒಂದೇ ಪದ್ಯದಲ್ಲಿಯೇ ಹೇಳಿದ್ದಾನೆ. ಇದಕ್ಕೂ **ಕಾವ್ಯಾ ದರ್ಶ**ವೇ ಆಧಾರ. ಇವನು ೩೬ ಅಲಂಕಾರಗಳನ್ನು ಹೇಳುತ್ತಾನೆ.

೪ನೆಯ ಗ್ರಂಥವೆಂದರೆ ಮಾಧವ (೧೫೦೦) ನ ಮಾಧವಾಲಂಕಾರ. ಇದು ದಂಡಿಯ **ಕಾವ್ಯದರ್ಶ**ದ ಭಾಷಾಂತರ. ಇದರಲ್ಲಿ ಮೂರು ಆಶ್ವಾಸಗಳಿವೆ.

೧೬ನೆಯ ಶತಮಾನದಲ್ಲಿಯ ತಿರುಮಲಾರ್ಯನು* ಪ್ರಸಿದ್ಧವಾದ ಲಕ್ಷಣಗ್ರಂಥಕಾರನು. ಇವನು ವಿಸ್ತೃತವಾಗಿ **"ಅಪ್ರತಿಮ ವೀರಚರಿತ"**

---

* ಇವನ ಪೂರ್ವದಲ್ಲಿ ಇನ್ನೂ ಅಲಂಕಾರಕರು ಇರುವರು. ಅವರೆಲ್ಲರೂ ರಸ ಪ್ರಧಾನರಾದುದರಿಂದ ಅವರ ಚರಿತ್ರೆ ಮುಂದೆ ಹೇಳಿದೆ.

ಎಂಬ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ನಾಲ್ಕು ಪ್ರಕರಣಗಳಿವೆ. ಕಾವ್ಯಲಕ್ಷಣ, ಶಬ್ದಗುಣ, ಅರ್ಥಗುಣ, ಇವುಗಳನ್ನು ಮೊದಲನೆಯ ಪ್ರಕರಣದಲ್ಲಿಯೂ ರೀತಿ, ಶಯ್ಯೆ, ಪಾಕ, ವೃತ್ತಿ, ಅನುಪ್ರಾಸ ಮೊದಲಾದವುಗಳನ್ನು ಎರಡನೆಯ ಪ್ರಕರಣದಲ್ಲಿಯೂ ಉಪಮೆ ಮೊದಲಾದ ನೂರು ಅಲಂಕಾರಗಳನ್ನು ಮೂರನೆಯುದರಲ್ಲಿಯೂ ರಸಾಲಂಕಾರಗಳನ್ನು ನಾಲ್ಕನೆಯುದರಲ್ಲಿಯೂ ನಿರೂಪಿಸುವನು. ಈ ಗ್ರಂಥಕ್ಕೆ ಪೋಷಕನು ಚಿಕದೇವರಾಜನೆಂದು ಕವಿಯು ಹೇಳುವನು. ಇದರಲ್ಲಿ ಚಂದ್ರಾಲೋಕ, ವಾಮನವೃತ್ತಿ, ಕಾವ್ಯಪ್ರಕಾಶಿಕ, ಮೊದಲಾದ ಸಂಸ್ಕೃತಗ್ರಂಥಗಳಿಂದ ಲಕ್ಷಣಗಳನ್ನು ತೆಗೆದುಕೊಂಡು ಅವುಗಳಿಗೆ ಕನ್ನಡದಲ್ಲಿ ವೃತ್ತಿಯನ್ನು ಬರೆದು ಸ್ವನಿರ್ಮಿತವಾದ ಪದ್ಯಗಳನ್ನು ಉದಾಹರಿಸಿದ್ದಾನೆ ಇವೆಲ್ಲವೂ ಚಿಕದೇವರಾಜನ ಸ್ತುತಿರೂಪವಾಗಿವೆ. ಅಪ್ರತಿಮವೀರನೆಂಬುದು ಚಿಕದೇವರಾಜನ ಬಿರುದುಗಳಲ್ಲೊಂದು.

ಲಿಂಗರಾಜನು ೧೮೬೯ರಲ್ಲಿ **ನರಪತಿವಿಜಯ**ವೆಂಬ ಗ್ರಂಥವನ್ನು ಬರೆದಿರುವನು. ಇದಕ್ಕೆ ಚಂದ್ರಾಲೋಕವೇ ಆಧಾರ. ಇದರಲ್ಲಿ ಶಬ್ದಾರ್ಥಾಲಂಕಾರಗಳು ಮಾತ್ರ ವರ್ಣಿತವಾಗಿವೆ.

ಕಾವ್ಯಸೌಂದರ್ಯಕ್ಕೆ ಶಬ್ದಾರ್ಥವೈಚಿತ್ರ್ಯಗಳೇ ಕಾರಣಗಳು.

**ಶಬ್ದಾಲಂಕಾರ**ಗಳಲ್ಲಿ (೧) ಅನುಪ್ರಾಸ, (೨) ಯಮಕ, (೩) ಚಿತ್ರಕವಿತ್ವವೆಂಬ ಮೂರು ಭಾಗಗಳಿವೆ.

**ಅರ್ಥಾಲಂಕಾರ:**—ಇದಕ್ಕೊಂದು ಇತಿಹಾಸವಿದೆ. ಕನ್ನಡ ಗ್ರಂಥಕಾರರನ್ನೇ ತೆಗೆದುಕೊಂಡರೆ, ನೃಪತುಂಗ, ಉದಯಾದಿತ್ಯ ಮಾಧವರು ೩೫ ಅಲಂಕಾರಗಳನ್ನು ಹೇಳುತ್ತಾರೆ. ನಾಗವರ್ಮನು ೬೦ ಅಲಂಕಾರಗಳನ್ನು ಹೇಳುತ್ತಾನೆ. ತಿರುಮಲಾರ್ಯನು ೧೨೦ ಹೇಳುತ್ತಾನೆ. ಇವುಗಳಲ್ಲಿ ಕೆಳಗಿನವು ಮುಖ್ಯವಾದವುಗಳೆಂದು ಕನ್ನಡ ಕೈಪಿಡಿಕಾರರು ಹೇಳುತ್ತಾರೆ. (೧) ಉಪಮೆ, (೨) ಅನನ್ವಯ, (೩) ಉಪಮೆಯೋಪಮೆ, (೪) ಪ್ರತೀಪ, (೫) ಪ್ರತಿವಸ್ತೂಪಮೆ, (೬) ವ್ಯತಿರೇಕ, (೭) ಸಮಯೋಗ, (೮) ದೀಪಕ, (೯) ರೂಪಕ, (೧೦) ದೃಷ್ಟಾಂತ,

(೧೧) ಸ್ಮರಣ, (೧೨) ಭ್ರಾಂತಿ, (೧೩) ಸಂದೇಹ, (೧೪) ಉತ್ಪ್ರೇಕ್ಷೆ, (೧೫) ಅಪಹ್ನುತಿ, (೧೬) ಉಲ್ಲೇಖ, (೧೭) ಅರ್ಥಾಂತರನ್ಯಾಸ, (೧೮) ಪರಿಕರ, (೧೯) ಪರಿಕರಾಂಕುರ, (೨೦) ಪರ್ಯಾಯೋಕ್ತಿ, (೨೧) ಸಮಾಸೋಕ್ತಿ, (೨೨) ಅಪ್ರಸ್ತುತಪ್ರಶಂಸೆ, (೨೩) ಶ್ಲೇಷ, (೨೪) ಸಹೋಕ್ತಿ, (೨೫) ವಿನೋಕ್ತಿ, (೨೬) ಅತಿಶಯೋಕ್ತಿ, (೨೭) ಅತ್ಯುಕ್ತಿ, (೨೮) ಆಕ್ಷೇಪ, (೨೯) ವಿಶೇಷೋಕ್ತಿ, (೩೦) ವಿಭಾವನಾ, (೩೧) ವಿಷಮ, (೩೨) ಸಮ, (೩೩) ವಿರೋಧಾಭಾಸ, (೩೪) ಸಾರ, (೩೫) ಏಕಾವಳಿ, (೩೬) ಕಾರಣ, (೩೭) ಅನುಮಾನ, (೩೮) ಕಾವ್ಯಲಿಂಗ, (೩೯) ಸಮುಚ್ಚಯ, (೪೦) ಪರಿಸಂಖ್ಯೆ, (೪೧) ಯಥಾಸಂಖ್ಯೆ, (೪೨) ಸ್ವಭಾವೋಕ್ತಿ, (೪೩) ಮೀಲಿತ, (೪೪) ಉನ್ಮೀಲಿತ, (೪೫) ತದ್ಗುಣ, (೪೬) ಅನುಗುಣ, (೪೭) ಪ್ರತ್ಯನೀಕ, (೪೮) ವ್ಯಾಜ್ಯಸ್ತುತಿ, (೪೯) ವ್ಯಾಜ್ಯನಿಂದೆ, (೫೦) ಮಿಶ್ರಾಲಂಕಾರಗಳು.* ಇಂತಿದೆ ಅಲಂಕಾರಗಳ ವಿಚಾರ.

## ರಸವಿಚಾರ

ಶಬ್ದಾರ್ಥವೈಚಿತ್ರ್ಯಗಳು ಕಾವ್ಯಕ್ಕೆ ಸೌಂದರ್ಯವನ್ನುಂಟು ಮಾಡುತ್ತಿದ್ದರೂ ಅವು ಬಾಹ್ಯಾಲಂಕಾರಗಳೇ. **ಧ್ವನಿ, ರಸಗಳೇ** ಕಾವ್ಯಲಲನೆಯ ಆತ್ಮವು. ರೀತಿ ಮಾರ್ಗಾದಿಗಳು ಅವಯವಗಳು. ಅಲಂಕಾರಗಳು ತೊಡುವುಗಳು. ಅಲಂಕಾರಗಳು ಕಾವ್ಯದ ಅಸ್ತಿತ್ವಕ್ಕೆ ಅನಿವಾರ್ಯವಾದವುಗಳಲ್ಲ. ಆದರೆ ಆತ್ಮವಿಲ್ಲದ್ದು ಕೇವಲ ಜಡ, ಚೈತನ್ಯರಹಿತವಾದುದು. ಕಾವ್ಯವಿಲ್ಲದೆ ಅಲಂಕಾರಗಳಿಗೆ ಅಸ್ತಿತ್ವವಿಲ್ಲ. ಅವುಗಳನ್ನು ನಾವು ಮನಸಬಂದಂತೆ ಬದಲು ಮಾಡಿಕೊಳ್ಳಬಹುದು. ಆದುದರಿಂದ **ರಸವೇ ಮುಖ್ಯ,** ಅಲಂಕಾರಗಳು ಗೌಣ. ಅಲಂಕಾರಗಳಿಗೂ, ರಸಾದಿಗಳಿಗೂ ಸ್ವಾಭಾವಿಕವಾಗಿಯೇ ದೇಹಾತ್ಮಗಳ ಸಂಬಂಧವಿದೆ. ಕಾವ್ಯಕ್ಕೆ ನೈಸರ್ಗಿಕವಾದ ಸೌಂದರ್ಯವೇ ಶ್ರೇಷ್ಠವಾದ ಅಲಂಕಾರವು. ಅದಿದ್ದರೆ ಇತರ ಅಲಂಕಾರಗಳು ಅನಾವಶ್ಯಕ. ಸುಂದರ ಲಲನೆಗೆ ಅಲಂಕಾರಗಳು

---

* **ಇವುಗಳ ವಿವರವನ್ನು ಕೈಪಿಡಿಯಲ್ಲಿ ನೋಡಬೇಕು.**

ಹೆಚ್ಚು ಸೌಂದರ್ಯವನ್ನು ಹೆಚ್ಚಿಸಬಲ್ಲುವೇ ಹೊರತು ಜೀವವಿಲ್ಲದ ಜಡಕ್ಕೆ ಸೌಂದರ್ಯವನ್ನು ಅಲಂಕಾರಗಳು ಹೇಗೆ ಹೆಚ್ಚಿಸಬಲ್ಲವು? ಅದು ಒಂದು ವಿಧವಾದ ವೈಚಿತ್ರ್ಯ ಅಷ್ಟೆ!

ಈ ಬಗೆಯ ಕಲ್ಪನೆಯು ಬೆಳೆದು ಅಲಂಕಾರಶಾಸ್ತ್ರದಲ್ಲಿ ಕ್ರಾಂತಿಯಾಯಿತು. ಭರತನು ನಾಟ್ಯಶಾಸ್ತ್ರದಲ್ಲಿಯಷ್ಟೇ ರಸವನ್ನು ವಿಸ್ತರಿಸಿದ್ದರೆ, ಒಂಬತ್ತನೆಯ ಶತಮಾನದಲ್ಲಿ **ಆನಂದವರ್ಧನಾಚಾರ್ಯರು** ವ್ಯಂಗಾರ್ಥಕ್ಕೆ (ಧ್ವನಿ) ಪ್ರಾಧಾನ್ಯವನ್ನು ಹೇಳಿ, ವಸ್ತು, ರಸ, ಅಲಂಕಾರಗಳು ವ್ಯಂಗಗಳಾಗುವವೆಂದೂ ಅವುಗಳಲ್ಲಿ **"ರಸವ್ಯಂಗ"**ವೇ ಶ್ರೇಷ್ಠವೆಂದೂ 'ಧ್ವನ್ಯಾಲೋಕ'ದಲ್ಲಿ ಸಿದ್ಧಪಡಿಸಿದನು. ಅಂದಿನಿಂದ ಕಾವ್ಯಗಳಲ್ಲಿಯೂ **ರಸಕ್ಕೇ** ಪ್ರಾಧಾನ್ಯವನ್ನು ಕೊಡುವ ಪದ್ಧತಿಯು ತಲೆದೋರಿತು. ಈ ಪಕ್ಷದವರು ರಸಕ್ಕೆ ಪ್ರಾಧಾನ್ಯವನ್ನು ಕೊಟ್ಟುದರಿಂದ ರಸಾಲಂಕಾರಗಳು ಕವಿಯ ಬುದ್ಧಿಯಂತೆ ಬೆಳೆಯುತ್ತ ನಡೆದವು. ಹೀಗೆ, ಅಲಂಕಾರಗಳ ಈ ಸಂಖ್ಯೆಯು ೩೫ರಿಂದ ೧೦೦ ರವರೆಗೆ ಬೆಳೆಯಿತು. ಈ ಬೆಳಕಿನಲ್ಲಿ ಸಾಗಿದ ಕನ್ನಡ ರಸಕಾರರ ಚರಿತ್ರೆಯನ್ನು ನೋಡೋಣ.

ನೃಪತುಂಗಾದಿಗಳು ಧ್ವನಿಯನ್ನು ಅಲಂಕಾರದಲ್ಲಿಯೇ ಸೇರಿಸಿಬಿಟ್ಟಿದ್ದರು. ಈ ನವೀನ ಮತವು ೯ನೆಯ ಶತಮಾನದಲ್ಲಿ ಉದಯವಾದರೂ ಕನ್ನಡಿಗರಿಗೆ ಮಾನ್ಯವಾಗಬೇಕಾದರೆ, ೨೦೦ ವರುಷಗಳು ಹಿಡಿದವು. ಯಾಕೆಂದರೆ ನಾಗವರ್ಮನ ಕಾವ್ಯಾವಲೋಕನದಲ್ಲಿ 'ಧ್ವನಿ'ಯ ಹೆಸರು ಕೂಡ ಇಲ್ಲ. ಕನ್ನಡದಲ್ಲಿ ಸುಪ್ರಸಿದ್ಧ ರಸಕಾರನೆಂದರೆ, **ಕವಿಕಾಮನು** (೧೨೦೦). ಕನ್ನಡದಲ್ಲಿ ರಸಪ್ರಕರಣವನ್ನು ವಿಸ್ತಾರವಾಗಿ ವರ್ಣಿಸುವ ಗ್ರಂಥಗಳಲ್ಲಿ ಇವನ **ಶೃಂಗಾರರತ್ನಾಕರವೇ** ಮೊದಲಿನದು. ಪಂಡಿತರು ಶೃಂಗಾರಸಾರವಾದ 'ಭಾವರಸಪ್ರಪಂಚ'ವನ್ನು ಹೇಳಬೇಕು ಎಂದು ಕೇಳಿಕೊಳ್ಳಲು ತಾನು ಬರೆದೆನೆಂದು ಗ್ರಂಥವನ್ನು ಪ್ರಾರಂಭಿಸುವನು. ತನ್ನ ಕಾವ್ಯದ ವಿಷಯವಾಗಿ ಈ ರೀತಿಯಾಗಿ ಹೇಳುತ್ತಾನೆ.

**ಭವಪಾದಾಂಬುಜ ಷಟ್ಪದಂ ನವರಸ ವ್ಯಾಪಾರಮಂ ಭಾವ ಸಂ- |**
**ಭಾವಮಂ ನಾಯಕ ನಾಯಿಕಾ ಸಖಸಖೀ ಸಂಭೋಗತದ್ವಿಪ್ರಲಂ ||**

**ಭಣಿಟ ಪ್ರಸ್ತುತ ವೈಶಿಕಾದಿ ರಸ ಶಾಸ್ತ್ರೋದ್ಧೃತಸನ್ಮಾರ್ಗ ವೃ-।**
**ತ್ತಿ ವಿಕಲ್ಪಂಗಳುಮಂ ಮನಂಗೊಳಿಸಿದಂ ಶೃಂಗಾರರತ್ನಾಕರಂ ॥**

ಶೃಂಗಾರರತ್ನಾಕರಕ್ಕೆ 'ರಸವಿವೇಕ'ವೆಂದೂ ಹೆಸರು ಉಂಟು. ಇದರಲ್ಲಿ ನಾಲ್ಕು ಪರಿಚ್ಛೇದಗಳಿವೆ. (೧) ನವರಸವ್ಯಾವರ್ಣನ, (೨) ಭಾವ ಭೇದನಿರ್ಣಯ, (೩) ನಾಯಕನಾಯಿಕಾ ವಿಕಲ್ಪವಿಸ್ತಾರ,(೪) ಸಖಸಖೀ ಸಂಭೋಗ ವಿಪ್ರಲಂಬಪ್ರವಾಸಸ್ವಾದಿವಿಸ್ತರ ಎಂಬ ನಾಲ್ಕು ಭಾಗಗಳು. ಇವೆಲ್ಲವೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಈ ಗ್ರಂಥದಿಂದ **ಸಾಳ್ವನೂ ತಿಮ್ಮನೂ** (೧೬೦೦) ಅನೇಕ ಲಕ್ಷ್ಣಣಪದ್ಯಗಳನ್ನು ಎತ್ತಿದ್ದಾರೆ.

ಕವಿಕಾಮನ ನಂತರ ಸುಪ್ರಸಿದ್ಧ ರಸಕಾರನೆಂದರೆ **ಸಾಳ್ವನು** (೧೫೫೦). ಇವನು **ರಸರತ್ನಾಕರ**ವನ್ನೂ **ಶಾರದಾವಿಲಾಸ**ವನ್ನೂ ಬರೆದಿದ್ದಾನೆ. ರಸರತ್ನಾಕರವು ಮುಖ್ಯವಾಗಿ ರಸಪ್ರಕ್ರಿಯೆಯನ್ನು ಪ್ರತಿಪಾದಿಸುತ್ತದೆ. ಶೃಂಗಾರಪ್ರಪಂಚ,ರಸವಿವರಣ, ನಾಯಕನಾಯಿಕಾ ವಿವರಣ, ಭಾವಾಧಿರಕಣ, ಎಂಬ ನಾಲ್ಕು ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಪಂಪ, ರನ್ನ, ನೇಮಿಚಂದ್ರ ಮೊದಲಾದ ಕವಿಗಳ ಗ್ರಂಥಗಳಿಂದ ಪದ್ಯಗಳು ಉದಾಹರಿಸಲ್ಪಟ್ಟಿವೆ. ತಾನು ಅವಲಂಬಿಸಿದ ಪೂರ್ವ ಶಾಸ್ತ್ರಕಾರರನ್ನು ಕವಿಯು ಈ ರೀತಿಯಾಗಿ ಹೇಳುತ್ತಾನೆ.

**ಆನಾರ್ಯರಿಂದ ತಿಳಿದನ್ನು । ತಾನಂದಿಯ ರುದ್ರಭಟ್ಟನಾತೆರದಿಂ ವಿ ।**
**ದ್ಯಾನಾಥ ಹೇಮಚಂದ್ರರ । ಭೂನುತ ಮಾರ್ಗಾದಿಯಿಂದಮಂ**
**ವಿರಚಿಸಿದೆಂ ॥**

ಇಂತು ನಾಗವರ್ಮಕವಿಕಾಮಾದಿಗಳ ಮಾರ್ಗದಿಂ ರಸ ಭಾವಾದಿಗಳನ್ನೆಲ್ಲ ವಿದ್ವತ್ಸಭೆಗಮುಭಯಭಾಷೆಗಮಿಷ್ಟಮಪ್ಪಂತು ಕನ್ನಡಿಸಿದೆಂ ಎಂದಿರುವನು.

ಇವನ ಎರಡನೇ ಗ್ರಂಥವೇ **ಶಾರದಾ ವಿಲಾಸ.** ಸಂಸ್ಕೃತದ ಧ್ವನ್ಯಾಲೋಕದಂತೆ, 'ಧ್ವನಿ' ಮುಂತಾದವುಗಳ ವಿಚಾರಗಳನ್ನು ಪ್ರೌಢ ರೀತಿಯಲ್ಲಿ ಬರೆಯಲು ಹೊರಟದ್ದು. ಆದರೆ ಈ ಗ್ರಂಥವು ಪೂರ್ಣವಾಗಿ ದೊರೆತಿಲ್ಲ. 'ಧ್ವನಿ ವ್ಯಂಗ್ಯವಿವರಣ'ವೆಂಬ ಎರಡನೇ ಆಶ್ವಾಸ ಮಾತ್ರ

ದೊರೆತಿದೆ. ಸುಮಾರು ೧೬೦೦ರಲ್ಲಿ ತಿಮ್ಮನು **ನವರಸಾಲಂಕಾರವನ್ನು** ಬರೆದನು. ಇದರಲ್ಲಿ ಮುಖ್ಯವಾಗಿ ರಸಪ್ರಕ್ರಿಯೆಯು ಪ್ರತಿಪಾದಿತವಾಗಿದೆ. ನಾಯಕ ನಾಯಿಕಾ ಲಕ್ಷಣವೂ ವ್ಯಭಿಚಾರಾದಿ ಭಾವಗಳೂ ಹೇಳಿವೆ. ಕವಿಕಾಮನ ಮತ, ನಾಗವರ್ಮನ ಮತ ಎಂದು ಆ ಕವಿಗಳ ಗ್ರಂಥಗಳಿಂದಲೂ ಸಾಳ್ವನ ರಸರತ್ನಾಕರದಿಂದಲೂ ಸೂತ್ರಗಳು ಅನುವಾದಿಸಲ್ಪಟ್ಟಿವೆ ಉದಾಹರಣಕ್ಕೆ ಪದ್ಯಗಳನ್ನೆಲ್ಲ ಪಂಪ, ಪೊನ್ನ, ನಾಗಚಂದ್ರ, ಸೋಮಚಂದ್ರ ಮೊದಲಾದ ಪೂರ್ವಕವಿಗಳ ಗ್ರಂಥಗಳಿಂದ ತೆಗೆದುಕೊಂಡಿದ್ದಾನೆ. ಈ ವಿಷಯ ವಿಚಾರ ಮಾಡಿದ ಇನ್ನೊಂದು ಗ್ರಂಥವೆಂದರೆ '**ಅಪ್ರತಿಮ ವೀರಚರಿತವು**'. ಇದರ ವಿಷಯವಾಗಿ ಹಿಂದೆಯೇ ಉಲ್ಲೇಖಿಸಿದೆ.

ಈ ರಸಪ್ರಕ್ರಿಯೆಯಲ್ಲಿ, ರತಿ(ಪ್ರೀತಿ),ಹಾಸ್ಯ (ವಿನೋದ), ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸೆ (ಅಸಹ್ಯತೆ), ವಿಸ್ಮಯ (ಆಶ್ಚರ್ಯ), ಶಮ (ಶಾಂತಿ) ಎಂಬ ಒಂಬತ್ತು **ಸ್ಥಾಯೀಭಾವಗಳನ್ನೂ** ೧. ನಿರ್ವೇದ, ೨. ಗ್ಲಾನಿ, ೩. ಶಂಕೆ, ೪. ಅಸೂಯೆ, ೫. ಮದ ೬. ಶ್ರಮ, ೭. ಆಲಸ್ಯ, ೮. ದೈನ್ಯ, ೯. ಚಿಂತೆ, ೧೦. ಮೋಹ, ೧೧. ಸ್ಮೃತಿ, ೧೨. ಧೃತಿ, ೧೩. ಲಜ್ಜೆ, ೧೪. ಚಪಲತೆ, ೧೫. ಹರ್ಷ, ೧೬. ಆವೇಗ, ೧೭. ಜಡತ್ವ, ೧೮. ಗರ್ವ, ೧೯. ವಿಷಾದ, ೨೦. ಔತ್ಸುಕ್ಯ, ೨೧. ನಿದ್ರೆ, ೨೨. ಮೂರ್ಛೆ, ೨೩. ಸ್ವಪ್ನ, ೨೪. ಎಚ್ಚರಿಕೆ, ೨೫. ಅಮರ್ಷ (ಕೋಪ), ೨೬. ಅವಹಿತ್ಥ (ಭಾವವನ್ನು ಮರೆಮಾಚುವುದು), ೨೭. ಉಗ್ರತೆ, ೨೮. ಮತಿ, ೨೯. ವ್ಯಾಧಿ, ೩೦. ಉನ್ಮಾದ, ೩೧. ಮರಣ, ೩೨. ತ್ರಾಸ, ೩೩. ವಿತರ್ಕಗಳೆಂಬ **ಸಂಚಾರೀ ಭಾವಗಳನ್ನೂ** ವರ್ಣಿಸುವರು.

ಈ ಸ್ಥಾಯಿಭಾವಗಳಿಂದ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ, ಶಾಂತ ಎಂಬ ಒಂಬತ್ತು ರಸಗಳು ಉಂಟಾಗುತ್ತವೆ.

ಕಾವ್ಯಸ್ವರೂಪ, ರಸ, ದೋಷ, ಗುಣ ಮೊದಲಾದವುಗಳನ್ನು ವಿವರಿಸುವದೇ ಈ ಲಕ್ಷಣ ಗ್ರಂಥಗಳ ಮುಖ್ಯ ಉದ್ದೇಶವು.*

## ಶಬ್ದ ಕೋಶಗಳು

ಶಬ್ದಕೋಶಗಳು ಆ ಸಾಹಿತ್ಯದ ಹುಲುಸಾದ ಬೆಳೆಯನ್ನು ಸೂಚಿಸುತ್ತವೆ. ಸಾಹಿತ್ಯವು ಬೆಳೆದು ಪ್ರಬಲವಾದಂತೆಯೂ, ವಿವಿಧತೆಯನ್ನು ತಾಳಿದಂತೆಯೂ, ಕಾಲಕಾಲಕ್ಕೆ ಭಾಷೆಯು ಹೊಸಹೊಸ ರೂಪಗಳನ್ನು ಧಾರಣಮಾಡಿದಂತೆಯೂ ಶಬ್ದಕೋಶಗಳ ಆವಶ್ಯಕತೆಯು ಉಂಟಾಗುತ್ತದೆ. ಆಗ ಶಬ್ದಕೋಶಗಳು ಉದಯವಾಗುತ್ತವೆ. ಈ ದೃಷ್ಟಿಯಿಂದ ಕನ್ನಡ ಕೋಶದ ಕಡೆಗೆ ನೋಡಿದರೆ, ಅವುಗಳ ಇತಿಹಾಸವೂ ಬಹು ಮನೋರಂಜಕವಾಗಿದೆ. ಕಾಲಕಾಲಕ್ಕೆ ಆವಶ್ಯಕತೆಯುಂಟಾದಂತೆ, ವಿವಿಧ ಕೋಶಗಳೂ ಟೀಕೆ, ಟಿಪ್ಪಣಿಗಳೂ ಹುಟ್ಟಿದ್ದು ಕಾಣುತ್ತದೆ.

ಕನ್ನಡ ಸಾಹಿತ್ಯವು, ಸಂಸ್ಕೃತ, ಹಳಗನ್ನಡ, ನಡುಗನ್ನಡ ರೂಪಗಳಿಂದ ಹೊಸಗನ್ನಡಕ್ಕೆ ಬಂದಿದೆ. ಸಂಸ್ಕೃತ, ಕನ್ನಡ ಶಬ್ದಸಂಪತ್ತಿಯಿಂದೊಡಗೂಡಿದೆ. ನಮ್ಮಲ್ಲಿ ಈ ಎರಡೂ ಬಗೆಯ ಕೋಶಗಳೂ ಕಣ್ಣಿಗೆ ಬೀಳುತ್ತವೆ. ಕನ್ನಡ ಕೋಶಗಳಲ್ಲಿ ಮೂರು ಬಗೆಯ ಕೋಶಗಳನ್ನು ನೋಡಬಹುದು. ಸಂಸ್ಕೃತ-ಕನ್ನಡ, ಕನ್ನಡ-ಸಂಸ್ಕೃತ, ಹಳಗನ್ನಡ-ಕನ್ನಡವೆಂದು.

ನಮ್ಮ ಸಾಹಿತ್ಯವು ಸಂಸ್ಕೃತದ ಛಾಯೆಯಿಂದ ಹೊರಟಾಗ, ಸಂಸ್ಕೃತ ಕನ್ನಡ ಕೋಶಗಳೂ, ಸಂಸ್ಕೃತದ ಪ್ರಭಾವವನ್ನು ಬಿಸುಟು ದೇಶಿಯ ಮಾರ್ಗದಿಂದ ಹೊರಟಾಗ, ಹಳಗನ್ನಡ ಹಾಗು ಕನ್ನಡ ತದ್ಭವಗಳ ನಿಘಂಟುಗಳೂ ಹೊರಟಿರಬೇಕು. ರೀತಿ, ಕುಳ, ಕ್ಷುಳಗಳು, ಅಡಗುವಾಗ ಅವುಗಳ ವಿವರಣೆಯನ್ನು ಮಾಡುವ ನಿಘಂಟಿನ ಆವಶ್ಯಕತೆಯು ಸ್ವಾಭಾವಿಕವಿದೆ.

---

* ಈ ಪ್ರಕರಣಕ್ಕೆ ಮೈಸೂರ 'ಯುನಿವ್ಹರ್ಸಿಟಿಯ' ಕನ್ನಡ ಕೈಪಿಡಿಯೇ ಆಧಾರವು. ಈ ಎಲ್ಲ ವಿಷಯಗಳ ವಿವರಣೆಯನ್ನು ವಿಸ್ತಾರವಾಗಿ ಅಲ್ಲಿ ನೋಡಬಹುದು.

ರನ್ನ ಕಂದವೇ ಬಹು ಪ್ರಾಚೀನ (೯೯೩). ವಸ್ತುಕೋಶ (೧೧೫೫), ಮಂಗಾಭಿಧಾನ (೧೩೦೮), ನಾನಾರ್ಥ ರತ್ನಾಕರ (೧೬೦೦) ಮೊದಲಾದವುಗಳು **ಸಂಸ್ಕೃತ ಶಬ್ದಗಳಿಗೆ** ಕನ್ನಡ ಪ್ರತಿಪದಗಳನ್ನು ಕೊಡುತ್ತವೆ. ಶಬ್ದಸಾರ, ಕರ್ನಾಟಕ ನಿಘಂಟು (೧೪ನೇ ಶ), ಚತುರಾಸ್ಯ ನಿಘಂಟು (೧೪೫೦), ಕರ್ನಾಟಕ ಶಬ್ದಮಂಜರಿ (೧೫೬೦), ಕಬ್ಬಿಗರ ಕೈಪಿಡಿ (೧೫೩೦) ಕರ್ನಾಟಕ ಸಂಜೀವನ (೧೬೮೦), ಕವಿಕಂಠಹಾರ (೧೬೪೦) ಮೊದಲಾದವುಗಳು ಹಳಗನ್ನಡ ಶಬ್ದಗಳನ್ನೂ, ಕನ್ನಡ ತಬ್ಭವಗಳಿಗೆ ಸಂಸ್ಕೃತ ಶಬ್ದಗಳನ್ನೂ ಹೇಳುತ್ತವೆ. ಕರ್ನಾಟಕ ಸಂಜೀವನವು ಱಐ, ಕುಳ, ಕ್ಷಳಗಳ ನುಡಿಗಳನ್ನೂ ಅವುಗಳ ಅರ್ಥವನ್ನೂ ವಿವರಿಸುತ್ತದೆ. ಇವುಗಳ ಇತಿಹಾಸವನ್ನು ಇದೇ ರೀತಿಯಾಗಿ ವಿವರಿಸುತ್ತೇವೆ.

## ಸಂಸ್ಕೃತಕ್ಕೆ ಕನ್ನಡ

ಈ ವಿಭಾಗದಲ್ಲಿ **ವಸ್ತುಕೋಶವೇ** ಮೊದಲಿನದು. ಎರಡನೇ ನಾಗವರ್ಮನೇ (೧೧೪೫) ಇದರ ಕರ್ತೃವು. ಕನ್ನಡದಲ್ಲಿ ಉಪಯೋಗಿಸುವ ಸಂಸ್ಕೃತ ಶಬ್ದಗಳಿಗೆ, ಅರ್ಥವನ್ನು ಹೇಳುವ ಪದ್ಯರೂಪವಾದ ಸಂಸ್ಕೃತ ಕರ್ನಾಟಕ ನಿಘಂಟಿದು. ಇದರಲ್ಲಿ (೧) ಏಕಾರ್ಥ ಕಾಂಡ, (೨) ನಾನಾರ್ಥ ಕಾಂಡ, (೩) ಸಾಮಾನ್ಯ ಕಾಂಡ ಎಂದು ಮೂರು ಕಾಂಡಗಳಿವೆ; ೧೭ ವರ್ಗಗಳಿವೆ; ೮೦೦ ಶ್ಲೋಕಗಳಿವೆ. ವರರುಚಿ, ಹಲಾಯುಧ, ಭಾಗುರಿ, ಶಾಶ್ವತ, ಅಮರಸಿಂಹ ಮೊದಲಾದವರ ಕೋಶಗಳನ್ನು ನೋಡಿ ಈ ಗ್ರಂಥವನ್ನು ಬರೆದೆನೆಂದು ಕವಿಯು ಹೇಳುತ್ತಾನೆ. ಗ್ರಂಥ ರಚನೆಯ ಉದ್ದೇಶವು ಆ ಕಾಲದ ಮನೋಭೂಮಿಕೆಯನ್ನು ತೋರಿಸುತ್ತದೆ.

**ಪುದಿದ ಮನಸ್ತಮಮುಮಂ ಬಿಡೆ । ಬಿದರೆ ಸದರ್ಥ ಪ್ರಕಾಶಮುಮಂ**
**ಮಾಡುಗುಮು ।**
**ಪ್ಪುದರಿಂ, ಸಮಸ್ತ ವಿದ್ಯಾ । ಪ್ರದೀಪ ಮಭಿಧಾನಕೋಶಮಲ್ಲದೆ**
**ಪೆರತೇಂ ॥**

**ಕರಮೆ ಜಡಮತಿಯುಮರಿವಂ। ತಿರೆ ಕನ್ನಡದಿಂ ಜಲಕ್ಕಸಾಗಿರ್ಪೆನೆಗಂ।**
**ವಿರಚಿಸಿದಂ ಕವಿಕಂಠಾ। ಭರಣನಿದಂ ನಾಗವರ್ಮನೆನೆ ಮೆಚ್ಚದರಾರ್ ॥**

ಕವಿಯು ಅಕ್ಷೌಹಿಣಿಯ ಅರ್ಥವನ್ನು ಕೆಳಗಿನಂತೆ ವಿವರಿಸಿದ್ದಾನೆ.

**ಒಂದುಸಾಮಜವೊಂದು ತೇರ್ ಮೂರಶ್ವಮುಯ್ದು ಕಾಲಾಳ್ಗಳುಂ**
**ಪತ್ತಿಯುಕ್ಕುಂ ।**
**ಸಂಪಪತ್ತಿ ಮೂರಾಗೆ, ಸೇನಾಮುಖಮೂರರಿಂ ಗುಲ್ಮಂ**
**ಮೂರುಗುಲ್ಮ ॥**
**ಕ್ಕೊಂದು ಗಣಮುವು ಮೂರು ವಾಹಿನಿ, ತತ್ತ್ರಯಂ ಪೃತನಾಖ್ಯೆ**
**ಪೃತನೆಗಳ್ ಮೂ ।**
**ರೊಂದಿತೋರೆ ಚಮೂ ಮೂರು ಮನೀಕಿನಿ ಪತ್ತನೀಕಿನಿಯಕ್ಷೌಹಿಣಿ**
**ಯೆನಿಕ್ಕುಂ ॥**

ನಾಗವರ್ಮನ ನಂತರ ಪ್ರಸಿದ್ಧ ಕೋಶಗಾರನೆಂದರೆ, **ಅಭಿನವ ಮಂಗರಾಜ** (೧೩೯೮). ಇವನು **ಅಭಿನವ ನಿಘಂಟು** ಅಥವಾ **ಮಂಗಾಭಿಧಾನ**ವೆಂಬ ಹೆಸರಿನ ಗ್ರಂಥವನ್ನು ಬರೆದಿರುವನು. ಇದು ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಸ್ವರ್ಗ, ಭೂ, ಪಾತಾಳ, ಸಾಮಾನ್ಯ, ನಾನಾರ್ಥ ಎಂದು ೫ ಕಾಂಡಗಳಿವೆ. ಒಂದೊಂದು ಕಾಂಡವೂ ವರ್ಗವಾಗಿ ವಿಭಾಗಿಸಲ್ಪಟ್ಟಿದೆ. ಈ ಗ್ರಂಥದಲ್ಲಿ **ಸಂಸ್ಕೃತ** ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ಕೊಟ್ಟಿದ್ದಾನೆ. ತನ್ನ ಹಿಂದೆ ಇದ್ದ ನಿಘಂಟುಕಾರರನ್ನು ಈ ರೀತಿಯಾಗಿ ಹೇಳಿದ್ದಾನೆ.

**ವರರುಚಿಯ ಜಾಣ್ಮೆ ಗೋಪಾಲಕನ ಬೆಡಗು ಭಾ ।**
**ಗುರಿಯ ಗೂಢತೆ ಧನಂಜಯನ ಪರ್ಯಾಯ ಸುರ ।**
**ಹರಿಯ ಸುವಿಭಕ್ತಿ ವಿಶ್ವಪ್ರಕಾಶದ ಚದುರು ನಾಗವರ್ಮನ ಕನ್ನಡಂ ॥**
**ವರ ವೈಜಯಂತಿಯ ನಯಂ ಹಲಾಯುಧನ ವಿ ।**
**ಸ್ತರದ ವಚನೋಕ್ತಿಯೆಂಬಿಂತಿವೆಲ್ಲವನು ಸಂ ।**
**ವರಿಸಿಯಭಿನವಮಂಗನುಸಿರಿದಂ ಸ್ತ್ರೀಬಾಲರರಿವಂತುಟಭಿಧಾನಮಂ ॥**

ತನ್ನ ಪ್ರಶಸ್ತಿಯನ್ನು "ಅಭಿನವ ಮಂಗನುಸಿರ್ದ ಸತ್ಕವಿತೆಯಂ

ಜರೆವರಾರ್, ಮರೆವರಾರ್ ಮಿಕ್ಕರೋಲ್ ಮನುಜ ಶಿಕ್ಷಾಪೇಕ್ಷೆಯಿಂ ದಾದನೇ'' ಎಂದು ಹೇಳಿಕೊಂಡಿದ್ದಾನೆ.

ಈ ಕವಿಯು **ಧ್ವನಿಯ** ವಿವಿಧ ನಾಮಗಳನ್ನು ಹೇಳುವ ರೀತಿ ಯನ್ನು ನೋಡಿರಿ.

**ಕೇಂಕೃತಂ ಪಕ್ಷಿಯೊಳಗೀಂಕೃತಂ ವಾತನೊಳು ।**
**ಝೇಂಕೃತಂ ತುಂಬಿಯೊಳು ಚೀತ್ಕೃತಂ ರಥಗಳೊಳು ।**
**ಭೀಂಕೃತಂ ಬಾಣದೊಳು ಫೀಟ್ಕೃತಂ ಕಲಭದೊಳು ಬೃಂಹಿತಂ**
**ಮದಗಜದೊಳು ॥**

**ಟಂಕೃತಂ ಬಿಲ್ಲಿನೊಳು ಸೀತ್ಕೃತಂ ಸುರತದೊಳು ।**
**ಹೂಂಕೃತಂ ಧೀರರೊಳು ಮಾಂಕೃತಂ ಪರ್ಣೆಯೊಳು ।**
**ಝುಂಕೃತಂ ಕಟಕದೊಳು ಹೇಷಾಕೃತಂ ವಾಜಿತತಿಯಲ್ಲಿ ವರ್ತಿಸಿರ್ಕುಂ ॥**

ಪ್ರತಿಯೊಂದು ಕಾಂಡಗಳ ಕೊನೆಯಲ್ಲಿ ಬಹು ಸುಂದರವಾದ ಗದ್ಯವಿದೆ—

**"ಇತಿ, ಶಶಿ ಪುರಾಧಿನಾಥ ಸೋಮೇಶ್ವರ ಚಾರುಚರಣಾರವಿಂದ ಮಧು ಸೇವಿತ ಮಧುಕರಾಯಮಾನ ಸಕಲ ವಿಬುಧಜನಮಾನಸೋಲ್ಲಾಸ ನಿವಾಸ ಅಭಿನವ ಸರಸ್ವತಿ, ಮಂಗರಾಜವಿರಚಿತಮಪ್ಪ ಭಿನವಾಭಿಧಾನ ದೋಳ್"**

ಈ ವರ್ಗದಲ್ಲಿ ಮೂರನೆಯವನೆಂದರೆ **ದೇವೋತ್ತಮನು.** ಇವನ **ನಾನಾರ್ಥ ರತ್ನಾಕರವು** ಸಂಸ್ಕೃತ ಶಬ್ದಗಳ ನಾನಾರ್ಥಗಳನ್ನು ಹೇಳು ತ್ತದೆ. ಈತನು ಗೋಪಾಲ, ಧನಂಜಯ, ಭಾಗುರಿ, ನಾಗವರ್ಮ ಮೊದ ಲಾದ ತನ್ನ ಪೂರ್ವದ ನಿಘಂಟುಕಾರರ ಹೆಸರುಗಳನ್ನು ಹೇಳುತ್ತಾನೆ. ಈ ಗ್ರಂಥದಲ್ಲಿ ೧೬೭ ವೃತ್ತಗಳಿವೆ.

ಕವಿಯು **ವಿಧಿ** ಶಬ್ದದ ನಾನಾರ್ಥಗಳನ್ನು ಬಹು ಸುಂದರವಾಗಿ ಕೆಳಗಿನ ಪದ್ಯದಲ್ಲಿ ವರ್ಣಿಸಿದ್ದಾನೆ.

**ಕಾಲದೊಳಂಬುಜಾಸನನೊಳುತ್ತಮನೊಳ್ ಕವಿಯೋಳ್ ವಿಧಾನದೋಳ್ ।**
**ಮೇಳದೊಳಂ ವಿಚಕ್ಷಣನೊಳಂ ಶ್ರುತಿಯೋಳ್ ವಿಧಿಶಬ್ದಮಕ್ಕು ಶುಂ ॥**

**ಡಾಲ ಕರಾಗ್ರದೋಳ್ ಶ್ರವಣಕುಂಡಲದೋಳ್ ವನಜಾತಮಧ್ಯದೋಳ್।**
**ಬಾಲೆಯೊಳಾಹವಂಗಳೊಳೆ ತೀರ್ಥದೊಳಂ ನಿಜಕರ್ಣಿಕಾನ್ವಯಂ ॥**

ಇದೇ ಸಮಯಕ್ಕೆ ಕವಿವಿಠ್ಠಲನೆಂಬ ಕವಿಯು (೧೬೦೦) ಅಮರ ಕೋಶಕ್ಕೆ ವ್ಯಾಖ್ಯಾನ ಬರೆದಂತೆ ತಿಳಿಯುತ್ತದೆ.

## ಕನ್ನಡ ಹಾಗು ತದ್ಭವಗಳಿಗೆ ಸಂಸ್ಕೃತ

ಈ ವರ್ಗದಲ್ಲಿ **ಚತುರಾಸ್ಯ ನಿಘಂಟು** ಬರುತ್ತದೆ. ಇದನ್ನು **ಚತುರಾಸ್ಯ ಬೊಮ್ಮರಸನು** (೧೪೫೦) ಬರೆದಿದ್ದಾನೆ. ಇದು **ಕಂದ**ದಲ್ಲಿ ಇದೆ. ೧೩೦ ಪದ್ಯಗಳಿವೆ. ಪ್ರತಿ ಪದ್ಯವೂ 'ಚತುರಾಸ್ಯ'ವೆಂದು ಮುಗಿಯುತ್ತದೆ. ಇದರೊಳಗೆ 'ಉಸಿರ್ವೆಂ ದೇಶಿತದ್ಭವಂ ತತ್ಸಮಮುಮಂ' ಎಂದು ಕವಿಯು ಹೇಳುತ್ತಾನೆ.

### ದೇಸಿಗೆ

**ಪೆರೆದಲೆಯಂ ಮಾದೇವಂ।**
**ಕರಿಗೊರಲಂ ತಿಸುಳಿಯ್ಯೆ ಮೊಗಂ ಸಾಂತಂ ಬಾಂ॥**
**ದೊರೆದಲೆಯಂ ಪಣೆಗಣ್ಣಂ।**
**ತರಿಸಂದುಮೆಯಾಣ್ಮನೆಂದು ತಿಳಿ ಚತುರಾಸ್ಯ॥**

**ಎಲರುಣಿ ಎನೆ ಭುಜಗಂ ನೆಲ।**
**ಕಲನೆಂದೆನೆ ಲೋಭಿ ಕಾವನೆನೆ ಕಾಮಂ ಕಾ।**
**ದಲನೆಂದೆನೆ ನಲ್ಲಂ ನಾ।**
**ಣಿಲಿಯೆನಲಭಿಮಾನಹೀನನೆಲೆ ಚತುರಾಸ್ಯ॥**

### ತದ್ಭವಕ್ಕೆ

**ಜಗುನೆಯೆ ಯಮುನೆ ದುಕೂಲಮೆ।**
**ದುಗುಲಂ ವೀಟಿಕೆಯೆ ವೀಳೆಯಂ ಪೇಟಿಕೆ ಪೇ॥**
**ಳಿಗೆ ತಾರಗೆ ತಾರಕೆಯಂ।**
**ದುಗೆ ಯಂದುಕೆ ತದ್ಭವಂಗಳಿವು ಚತುರಾಸ್ಯ॥**

## ಹಳಗನ್ನಡ-ಕನ್ನಡ

ಈ ವಿಭಾಗದಲ್ಲಿ ರಸ್ಸಸ ರನ್ನಕಂದವು ಮೊದಲನೆಯದಾಗಿ ಬರುತ್ತದೆ. ಇದೇ ಕೋಶಗಳಲ್ಲಿ ಪ್ರಾಚೀನ. ಇದು ಕಂದರೂಪವಾಗಿದೆ. ಪ್ರತಿಯೊಂದು ಪದ್ಯವೂ 'ಕವಿರತ್ನ'ವೆಂದು ಕೊನೆಗೊಳ್ಳುತ್ತದೆ. ಈ ಗ್ರಂಥವು ಪೂರ್ಣವಾಗಿ ದೊರೆತಿಲ್ಲ. ಇದು ಹಳಗನ್ನಡದಿಂದ ಕನ್ನಡಕ್ಕೆ ಅರ್ಥವನ್ನು ಹೇಳುತ್ತದೆ.

ಕವಿಯ ಅರ್ಥವಿವರಣೆಯು ಕೆಳಗಿನ ಪದ್ಯದಲ್ಲಿ ಚನ್ನಾಗಿ ಕಾಣುತ್ತದೆ.

> **ಕೋಸಿತೆನಲ್ ಪೋಣಿಸಿದುದು ।**
> **ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳನುಂ ॥**
> **ವಾಸಿತಮೆನೆ ಕಂಪುಂ ಮಿಗೆ ।**
> **ಸೌಸವಮೆನೆ ಸಮ್ಮದಾರ್ಥಮೆಲೆ ಕವಿರತ್ನಾ ॥**

ರನ್ನ ಕಂದದ ನಂತರ ಈ ವರ್ಗದಲ್ಲಿ ಎರಡನೆಯದೆಂಪರೆ, **ಕರ್ನಾಟಕ ಶಬ್ದಸಾರಂ.** ಇದು ವಚನರೂಪವಾಗಿದೆ. ಇದು ಛಂದೋಬದ್ಧವಾಗಿಯೂ ಇದೆ ಎಂದೂ ಬಹುಶಃ ೧೪ನೇ ಶತಮಾನದಲ್ಲಿಯೇ ವಿರಚಿತವಾಗಿರಬೇಕೆಂದೂ, ಮೆ.ಕಿಟಲ್ ಸಾಹೇಬರು ಹೇಳುತ್ತಾರೆ. ಇದರ ಆಧಾರದಿಂದಲೇ ತೋಂಟದಾರ್ಯನ **ಕರ್ನಾಟಕ ಶಬ್ದ**ಮಂಜರಿಯು ಹುಟ್ಟಿರಬೇಕೆಂದು ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರು ಅಭಿಪ್ರಾಯ ಪಡುತ್ತಾರೆ.

ಈ ನಿಘಂಟಿನಲ್ಲಿ ೬೭೬ ಖಂಡಗಳಿವೆ. ೧೪೧೭ ಪದಗಳಿಗೆ ಅರ್ಥ ಕೊಟ್ಟಿದೆ. ಗ್ರಂಥಕರ್ತೃವಾರೋ ತಿಳಿಯದು. ಈ ಗ್ರಂಥದ ಮೊದಲನೆಯ ವಚನ.

### ಈಶ್ವರನ ಹೆಸರುಗಳು.

**ಎಣ್ಮೆಯ್ಯಂ, ಗೊಂದೆವಳಯಿಗೆಯುಂ, ಎಳೆದೇರಂ, ಪಿರಿತಿನಿಯಾಣ್ಮಂ, ಸೊಡಬಲಿವನೆಯುಂ, ಎಲರುಣಿವೆದೆಯುಂ, ಅರುವೊಗನಯ್ಯಂ, ಪೊಂಬೆಟ್ಟವಿಲ್ಲಂ, ಇಂಗಳಗಣ್ಣಂ, ಈಸರಂ, ಪಂದಲೆವಚ್ಚಂ, ಬಾಂಬೊಚ್ಚದಲೆಯುಂ,**

ಸಬ್ಬಂ, ಬಗ್ಗದೊವಲುಡೆಯುಂ, ಬಾನ್ನವಿರಂ, ದಪ್ಪಕವಗೆಯುಂ, ಅಮರ್ದು ವೆಣ್ಣೋಸಂ, ಕಂದುಗೊರಲಂ, ಮಾದೇವಂ, ಬಾಂಬೊಳಲುರಿಕಂ, ದೇಸಿಗಂ, ಗಂದರಗಿವಿಯುಂ, ಬೆಳ್ಪದಿ, ಮಿಗಗಯ್ಯಂ, ಕಣ್ಣಡಿಗಂ, ತಿಸುಳಿ, ಪೆಣ್ಗೊಡೆಯುಂ, ಈಸಂ, ಗೊರವಂ, ಚಳಿವೆಟ್ಟಳಿಯುಂ, ಸಸಿದಲೆಯುಂ, ಗಹನಂ, ಐವೊಗಂ ಈ ೩೩ ಈಶ್ವರಂಗೆ ಪೆಸರ್.

ಮಾಕಾಳಿ, ಮಾದೇವಿ, ಸಬ್ಬಾಣಿ, ಐಕಿಲ್ವೆಟ್ಟಣುಗಿ, ಸಿಂಗದೇರಳ್ ಈ ಐದು ಪಾರ್ವತಿಯ ಪೆಸರ್.

ಈ ಮಾಲೆಯಲ್ಲಿ ಮೂರನೆಯ ಗ್ರಂಥವೆಂದರೆ, ಲಿಂಗಮಂತ್ರಿಯ **ಕಬ್ಬಿಗರ ಕೈಪಿಡಿಯು**. ಇದು ವಾರ್ಧಿಕ ಷಟ್ಪದಿಯಲ್ಲಿ ಒರೆದಿದೆ. ೧೧೦ ಪದಗಳಿವೆ. ಇದರಲ್ಲಿ ಮುಖ್ಯವಾಗಿ **ಹಳೆಗನ್ನಡ** ಪದಗಳ ಅರ್ಥವು ಹೇಳಲ್ಪಟ್ಟಿವೆ. ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯವನ್ನು ಕೆಳಗಿನಂತೆ ಹೇಳುತ್ತಾನೆ.

ಮಿಸುಪ ಗೂಢ ಪದಪ್ರಯೋಗದೊಳ್ಪಂ ರಸವ ।
ನೊಸರ್ವಚ್ಚಗನ್ನಡದ ಚೆಲ್ವುಮಂ ತದ್ಭವದ ।
ಬೆಸುಗೆಯುಂ ದೇಶ್ಯಕ್ಕಮರ್ದ ಸೊಂಪಂ ತೊಳಪ ತತ್ಸಮದ ಬಿನ್ನಣಮನು॥

ಉಸಿರೆಂದು ಕೋವಿದರ್ ಬೆಸಸಲಾನಿದಕೆ ಕೋ ।
ಭಿಸುವ ಕಬ್ಬಿಗರ ಕೈಪಿಡಿಯೆಂದು ಪೆಸರನಿ ।
ತ್ತೊಸೆದು ಪೇಳ್ದಪೆನು... ... ... ...

ಕವಿಯು ಅರ್ಥ ವಿವರಿಸುವ ರೀತಿ ನೋಡಿ:—

ತುಳಿತೆಂದುಂ ವೊಳ್ಗೆಂದುಂ ಕುಂಬೆಂದು ಮೊರಗೆಂದು ।
ಬಳಿಕ ಮಣಿಯೆನೆ ನಮಸ್ಕಾರಕ್ಕೆ ಪೆಸರಕ್ಕು ।
ಮಿಳೆಯ ಪಿರಿಯರ್ ನೇರಿದರ್ ದಿಮ್ಮಿದರ್ ಗನಹರುರೆ ಸೈದರೆನಿಸಿ ಕೊಳ್ಗುಂ ॥

ತಳೆದಿರ್ಪರಾ ದ್ವಿಜರ್ ನೆಲದ ಮುದ್ದುಣಿವೆಸರ ।
ನುಳಿದರಸುಮಗನರಮಗಂಗೆ ಪೆಸರಾ ಪಸುಬೆ ।
ವಳನೆಂದು ವೈಶ್ಯನುಂ ಕುಡಿಯೆನಲೊಕ್ಕಲಿಗನೆಂದಿಳೆಗೆ ಸಿದ್ಧಾಂತವು ॥

ಈ ವರ್ಗದಲ್ಲಿ ಆನೆಯ ಗ್ರಂಥವೆಂದರೆ, ವಿರಕ್ತ ತೋಂಟದಾರ್ಯರ (೧೫೬೦) **ಕರ್ನಾಟಕ ಶಬ್ದಮಂಜರಿಯು** ಇದರಲ್ಲಿ ೧೨೨ ಪದ್ಯಗಳಿವೆ. ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. **ಹಳಗನ್ನಡ** ಪದಗಳಿಗೆ ಅರ್ಥ ವನ್ನು ಹೇಳುವದು. "ಅಚ್ಚಗನ್ನಡ, ಗೂಢಪದ, ತತ್ಸಮಂ ತದ್ಭವ ಗಳೆಂಬ ಶಬ್ದನಾಮಗಳನೋರಂತೆ, ವಿರಚಿಸಿದೆನಲ್ಲಾ ಕವೀಶ್ವರರುದಾ-ಹರಣ ಸನ್ಮಾರ್ಗವಿಡಿದು" ಎಂದು ಕವಿಯು ಹೇಳುತ್ತಾನೆ. ಕೆಳಗಿನ ಪದ್ಯವು ಅವನ ರೀತಿಯನ್ನು ತೋರಿಸುವದು.

**ತುರುವರ್ ಗೋವರ್ಕಳೆನೆ ಗೊಲ್ಲರಕ್ಕು ಮಾ ।**
**ತುರುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು ।**
**ತುರುವಿಂಡು ತುರುಮಂದೆಯುಕ್ಕು ಗೋಸಮುದಾಯವಾಕಳೆಂದಕ್ಕು ಕಂದು ॥**
**ಕರುವಕ್ಕು ವತ್ಸದೊಳು ಹೋರಿಯೆಡೆಯೆಂದನ ।**
**ಡ್ಕರು ಗೋಮಯವದೆಂದು ಯರಣವೆಸರದು ನೋಡೆ ।**
**ಕರುವಿನ ಸಗಣಮಕ್ಕು ಮಾಂಗೊಳಲೆನಲ್ಕೆ ಯಾವಿನಕೊಳಗು ತಾನೆನಿಕ್ಕುಂ ॥**

**ಕವಿಕಂಠಹಾರವು** ಇದೇ ಜಾತಿಯಲ್ಲಿ ಸೇರುವದು. **ಸೂರ್ಯನು** (೧೬೪೦) ಇದನ್ನು ಬರೆದವನು. ಇದರಲ್ಲಿ ೨೭೧ ಕಂದಗಳಿವೆ. ಹಿಂದಿ ನವರು ಹೇಳಿರುವ ಶಬ್ದಗಳನ್ನು ಸರಗೊಳಿಸಿ ಈ ನಿಘಂಟಿನಲ್ಲಿ ಹೇಳಿದಂತೆ ಕವಿಯು ಹೇಳುತ್ತಾನೆ.

**ಹರುಷಂ ಮಿಗೆ ಮುನ್ನಾನಾದ್ಯರಿ ।**
**ನೊರೆದೊಳ್ಕರ್ನಾಟಶಬ್ದಮಣಿನಿಚಯಮುಮಂ ॥**
**ಸರಗೊಳಿಸಿ ಪೆಳ್ದಿನಿದು ತಾಂ ।**
**ಪರಿಕಿಸೆ ಕವಿಕಂಠಹಾರಮೆನಿಕುಂ ಪೆಸರಿಂ ॥**

ವಿಷ್ಣುಶಬ್ದದ ಅರ್ಥ ಹೇಳಿದ ರೀತಿ ನೋಡಿ—

**ಸಿರಿಯುರಸನರಲ ಪೊಡೆಯುಂ ।**
**ಪರಿಕಿಸೆ, ತಾಂ ಸೌರಿಯೆಂದು ಮಿಂಗಡಲಳಿಯಂ ।**

ನೆರೆ ರಕ್ಕಸ ಬೇರಂ ತಾ ।
ವರೆಗಣ್ಣಂ ಕಾವನೈಯ್ಸುನುಂ ಕಾರೊಡಲಂ ॥

**ಕರ್ನಾಟಕ ನಿಘಂಟು** ಈ ರೀತಿಯಲ್ಲಿ ಕೊನೆಯದೆಂದು ಹೇಳಬಹುದು. ಇದರ ಕಾಲವು ಇನ್ನೂ ನಿಶ್ಚಿತವಾಗಿಲ್ಲ. ೧೬ನೇ ಶತಮಾನದ್ದಿರಬಹುದೆಂದು ತರ್ಕಿಸುತ್ತಾರೆ. ಗ್ರಂಥಕರ್ತನು ಯಾರು ಎಂಬುದೂ ಗೊತ್ತಾಗಿಲ್ಲ. ಗ್ರಂಥಾಂತ್ಯದಲ್ಲಿ 'ಕಪ್ಪಿಗರ ಕೈಪಿಡಿಯೆಂಬಭಿಧಾನಮನೋದುವರ್ಗೆ ಮಂಗಳಮಸ್ತು । ಭದ್ರಂ ಭೂಯಾತ್। ಭಟ್ಟಾಕಳಂಕಯತೀಂದ್ರಾಯನಮಃ' ಎಂದು ಬರೆದಿರುವನು. ಇದರಲ್ಲಿ ಕಂದಗಳೂ, ವೃತ್ತಗಳೂ, ೯೯ ಪದ್ಯಗಳೂ ಇವೆ ಇವನ ಅರ್ಥವಿವರಣೆಯನ್ನು ನೋಡಿ.

ಪಕ್ಕಿ ಪಕ್ಷಿಯೆ, ರಕ್ಕೆ ರಕ್ಷೆಯೆ ಸಕ್ಕದಂ ಸುರಭಾಷಿತಂ ।
ಕುಕ್ಕೆ ಕುಕ್ಷಿಯೆ ಕೆಕ್ಕೆ ಕೆನ್ನೆಯೆ ಪಾಗದಂ ನರಭಾಷಿತಂ ॥
ಬಿಕ್ಕೆ ಭಿಕ್ಷೆಯೆ ಸಕ್ಕಿ ಸಾಕ್ಷಿಯ ಹಾರವಾರವೆನಲ್ಕೆ ತಾ ।
ಜಕ್ಕವಕ್ಕಿಯೆ ಗಾಲಿವಕ್ಕಿಯೆನಲ್ಕಮಳ್ಕಮಳಾಹ್ವಯಂ ॥

## ಱಟಿ, ಕುಳ, ಕ್ಷಳ ನಿಘಂಟು

ಱಟಿ, ಕುಳ ಕ್ಷಳಗಳು ಅಡಗುವ ಸಮಯದಲ್ಲಿ ಅವುಗಳ ಅರ್ಥದ ಆವಶ್ಯಕತೆಯುಂಟಾಗಿರಬೇಕು. ಮತ್ತೆ ಕಾವ್ಯದಲ್ಲಿ ಅವು ಉಳಿಯಬೇಕೆಂಬ ಪ್ರಯತ್ನದ ಸಮಯದಲ್ಲಿ **ಕರ್ನಾಟಕ ಸಂಜೀವನವು** ಬರೆಯಲ್ಪಟ್ಟಂತೆ ತೋರುತ್ತದೆ. ಇದನ್ನು ಬರೆದವನು ಶೃಂಗಾರ ಕವಿಯು (೧೬೦೦). ಈ ಕವಿಯು ಱಟಿ, ಕುಳ, ಕ್ಷಳ ವಿಷಯದಲ್ಲಿ ಪ್ರಾಸನಿಯಮವನ್ನು ಅನುಸರಿಸಬೇಕು. ಅವುಗಳನ್ನು ಬೆರಸಲಾಗದು, ಇದು ಪಂಪರಾಜಾದಿ ಕರ್ನಾಟಕ ಕವಿರಾಯರ ಮತವೆಂದು ಒಂದು ಪದ್ಯದಲ್ಲಿ ವರ್ಣಿಸಿದ್ದಾನೆ. ಇದು ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ೩೫ ಪದ್ಯಗಳಿವೆ. ಇದರಲ್ಲಿ ಱಟಿ, ಕುಳ, ಕ್ಷಳಗಳುಳ್ಳ ಕನ್ನಡ ನುಡಿಗಳೂ ಅವುಗಳ ಅರ್ಥವೂ ಹೇಳಲ್ಪಟ್ಟಿದೆ. 'ಕನ್ನಡದೊಳೊರೆವೊಡಿದು ಲಕ್ಷಣಕೆ ಜೀವನಂ' ಆದುದರಿಂದ ಕವಿ, ಈ ಗ್ರಂಥಕ್ಕೆ ಈ ಹೆಸರನ್ನು ಇಟ್ಟಿದ್ದಾನೆ.

## ಱಕ್ಕೆ

ಉಱುಗೆಸಲ್ ಬೇಟಮುಱಿಗಿದನೆಂದೊಡೊಲ್ದವಂ ।
ಪಱಿ ತೆಗಱ್ ನಿಂದೆ ಪಱಿ ವಸ್ತ್ರಭೇದಂ ಒಱಕೆ ।
ಬಱಿಕಂಬಱಿಕ್ಕೆ ಬಱಿಯಂ ಮತ್ತೆನಿಪ್ಪುದಾಪೊಂಪುಱಿಯೆಸಲ್
ಸಂತಸಂ ॥

ಘಱಿಯುಮೆನೆ ಸಮಕಟ್ಟು ಬಾಱಿತ್ತಿಯೆನೆ ಯೋಗ್ಯನುದು ।
ಪಱಿಯುಗೆ ಪತಾಕೆ ಜಳಯಂತ್ರಮುದು ಜೀರ್ಕೊಳವಿ ।
ಬಱಿವಱಿಯೆನಲ್ ಕೂಟ್ಟ ವಸ್ತುವಿನ ಬಱಿವಿಡಿದು ಬಱುದೆ
ಪೋಪೊಡಮೆಯುಕ್ಕುಂ ॥

## ಕುಳದ ಳಕಾರಕ್ಕೆ

ಝಳಪಿಸಿದನೆಂದು ಜಡಿದಂ ಮುನಿಸು ಮುಳಿಸು ಜಂ ।
ಗುಳಿ ಸೆರಪಿ ಜಾಂಗುಳಿಯೆ ಮೂರ್ಛೆದೊಂದುಳಿ ಮುದಂ ।
ಪೆಳಱುಳುಕಳಱೆಂದು ಭೀತಿಯೊಳಱೆ ರವಂ ನೋಳ್ದನೆಳ
ಮುಂದೆ ಪೋದಂ ॥

ಮೊಳೆಯುದಂಕುರಮೋಳ್ಕೆಸಿಧುವನಂ ಜಡತೆ ಸೋ ।
ಕುಳಿ ನೀಳ್ತೆನೆಸಲಿತ್ತ್ವಂ ಮಾಳಿವೆನೆ ಬಯಲ್ ।
ತೊಳಗುಬೆಳಗೆನೆ ಕಾಂತಿ ಲಳಿಗೆಲವು ಬಳಸುತಿರಿಪಂಕುಪ್ಪಸಿಗ
ಬಳಸಿಗಂ ॥

## ಕ್ಷಳಕ್ಕೆ

ಕ್ಷಳನೆಂಬುದೊಂದುಂಟು ಸಂಸ್ಕೃತದ ಲಾಕ್ಷರ ।
ಸ್ಥಳವಂ ಳಕಾರವಾಗುಚ್ಚರಿಪುವದು ಜಲಕೆ ।
ಒಳ, ಬಲಕೆ ಬಳ, ಕುಲಕೆ ಕುಳ, ಕಮಲ ಶಬ್ದಕ್ಕೆ ಕಮಳವಂತು
ಸಂಸ್ಕೃತಂ ॥

ಕ್ಷಳನೊಳಂ ಅಱಿಸುಂಟು ಕಹಳೆ ಶಬ್ದಕೆ ಕಾಱಿ ।
ಪುಳಿನಕ್ಕೆ ಪುೞಿಲುಜ್ಜ್ವಳಕ್ಕೆ ತಾನುಜ್ಜಱಿಂ ।
ಕಳನುಕ್ಕೆ ಕಱಿನ ಕಂಬಳಕೆ ಕಂಬೞೀಯೆಂಬ ತೆಱದಿಸಹುದದು
ಕನ್ನಡಂ ॥

ಇವಲ್ಲದೆ ಅಕಾರಾದಿ ವೈದ್ಯ ನಿಘಂಟುಗಳೂ ಟೀಕಗಳೂ ಇವೆ.

—

# ೯. ಕನ್ನಡ ಸಾಹಿತ್ಯದಲ್ಲಿಯ ಶಾಸ್ತ್ರಗಳು

ಸಾಹಿತ್ಯದ ಕಾವ್ಯ, ನಾಟಕ ಮೊದಲಾದ ವಿವಿಧಾಂಗಗಳನ್ನು ವಿವರಿಸಿದ್ದಾಯಿತು. ಮಾನವನ ಜೀವನಕ್ಕೆ ಕೇವಲ ಲಲಿತ ಸಾಹಿತ್ಯವೇ ಸಾಲದು. ಅವನ ಬುದ್ಧಿಬೆಳವಣಿಗೆಗೆ ಉಪಯುಕ್ತವಾದ, ತತ್ವಜ್ಞಾನ, ಜ್ಯೋತಿಷ, ವೈದ್ಯ ಮೊದಲಾದ ಶಾಸ್ತ್ರಗಳ ಬೆಳವಣಿಗೆಯೂ, ಅವುಗಳ ಸಾಹಿತ್ಯವೂ ಅವಶ್ಯವಿದೆ. ಈ ದೃಷ್ಟಿಯಿಂದ ಶಾಸ್ತ್ರಗಳ ಕಡೆಗೆ ನೋಡಿದರೆ, ವೇದಾಂತ, ಯೋಗ, ವೈದ್ಯ, ಜ್ಯೋತಿಷ ಇವೇ ಮೊದಲಾದ ವಿವಿಧ ಶಾಸ್ತ್ರಗಳು ಕಣ್ಣಿಗೆ ಬೀಳುತ್ತವೆ. ಇವುಗಳು ಕನ್ನಡ ಜನಾಂಗದ ವಿಕಾಸವನ್ನು ಸೂಚಿಸುತ್ತವೆ.

## ವೇದಾಂತ ಶಾಸ್ತ್ರ

ಒಂದು ಬಗೆಯಿಂದ ಮೋಕ್ಷವೇ ಧ್ಯೇಯವಾಗಿಟ್ಟುಕೊಂಡ ಕನ್ನಡ ಸಾಹಿತ್ಯಕಾರರ ಸಾಹಿತ್ಯದ ಬಹುಭಾಗವು ವೇದಾಂತವೇ ಇದೆ. ವೇದಭಾಷ್ಯ, ಯಜುರ್ವೇದದ ಟೀಕೆ, ಕೈವಲ್ಯ ಕಲ್ಪವಲ್ಲರಿ,—ಕೈವಲ್ಯ ಪದ್ಧತಿ, ತತ್ವಾರ್ಥ ಸೂತ್ರವೃತ್ತಿ, ತತ್ವರತ್ನಪ್ರದೀಪಿಕೆ, ಜಿನಾಗಮ, ಜಿನ ಸಂಹಿತೆ, ಅನುಭವಾಮೃತ, ಹರಿಕಥಾಮೃತಸಾರ ಮೊದಲಾದ ಅನೇಕ ತತ್ವಶಾಸ್ತ್ರಗಳು ಚಿರಪರಿಚಿತವು. ಜೈನ ವೈದಿಕ ತತ್ವಜ್ಞಾನ ಗ್ರಂಥಗಳೂ ಯೋಗ ರತ್ನಾಕರ, ರಾಜಯೋಗ ಮೊದಲಾದ ಯೋಗಿಕ ಗ್ರಂಥಗಳೂ ವಿಪುಲವಾಗಿವೆ. ಈ ವಿಷಯವು ಹಿಂದೆ ಆಯಾ ಸಂದರ್ಭದಲ್ಲಿ ವಿಸ್ತಾರವಾಗಿದೆ.

## ವೈದ್ಯಶಾಸ್ತ್ರ

ಜೀವನಕ್ಕೆ ಅವಶ್ಯವಾದ ವೈದ್ಯಶಾಸ್ತ್ರವು ನಮ್ಮಲ್ಲಿ ಬಹುದಿನಗಳಿಂದ ನಡೆದುಬಂದಿದೆ. ವಿವಿಧ ಶಾಖೆಗಳಲ್ಲಿ ಬೆಳೆದಿದೆ. ಸ್ತ್ರೀವೈದ್ಯ' ವಿಷವೈದ್ಯ, ಬಾಲವೈದ್ಯ, ಮೊದಲಾದ ಪ್ರಕಾರಗಳೂ ಗೋವೈದ್ಯ, ಅಶ್ವ

ವೈದ್ಯ, ಮೊದಲಾದ ಪಶುವೈದ್ಯದ ವಿಸ್ತಾರವೂ ನಮ್ಮ ವೈದ್ಯಶಾಸ್ತ್ರದ ಬೆಳವಣಿಗೆಯನ್ನು ಸೂಚಿಸುತ್ತವೆ. ಇವೆಲ್ಲವುಗಳ ಬಗ್ಗೆ ಗ್ರಂಥಗಳಿರುವದು ಹೆಮ್ಮೆಯ ಮಾತು. ಆವುಗಳ ಚರಿತ್ರೆಗಳನ್ನು ಇಲ್ಲಿ ಕೊಡುತ್ತೇವೆ.

## ಆಯುರ್ವೇದ (ವೈದ್ಯ)

**ಜಗದ್ದಳ ಸೋಮನಾಥನ** 'ಕರ್ನಾಟಕ ಕಲ್ಯಾಣಕಾರಕ'ವೇ ಮೊದಲನೆಯ ವಿಸ್ತೃತವಾದ ವೈದ್ಯ ಗ್ರಂಥವು. ಪೂಜ್ಯಪಾದ ಕೃತ ಸಂಸ್ಕೃತ ಕಲ್ಯಾಣಕಾರಕದ ಭಾಷಾಂತರವು. ಇದರ ಅಸಮಗ್ರ ಪ್ರತಿಯಲ್ಲಿ ಪೀಠಿಕಾ ಪ್ರಕರಣ, ಪರಿಭಾಷಾ ಪ್ರಕರಣ, ಷೋಡಶ ಜ್ವರ ನಿದಾನ ಚಿಕಿತ್ಸಾ ನಿರೂಪಣ, ಅತಿಸಾರ, ಗ್ರಹಣೀ ನಿದಾನ ಚಿಕಿತ್ಸಾ ನಿರೂಪಣ, ರಕ್ತಪಿತ್ತ ನಿದಾನ ಚಿಕಿತ್ಸಾ ನಿರೂಪಣ, ಕ್ಷಯ ನಿದಾನ ಚಿಕಿತ್ಸಾ ನಿರೂಪಣ, ಉದರ ರೋಗ ನಿದಾನ ಚಿಕಿತ್ಸಾ ನಿರೂಪಣ, ಗುಲ್ಮ ನಿದಾನ ಚಿಕಿತ್ಸಾ ನಿರೂಪಣ ಎಂಬ ಎಂಟು ಅಧ್ಯಾಯಗಳು ಮಾತ್ರ ಇರುತ್ತವೆ. ಬಾಹಟ, ಸಿದ್ಧಸಾರ, ಚರಕ ಎಂಬ ವೈದ್ಯಗ್ರಂಥಗಳಿಗಿಂತಲೂ ಪೂಜ್ಯಪಾದನ ಕಲ್ಯಾಣಕಾರವು ಉತ್ಕೃಷ್ಟವಾದುದೆಂದೂ ಅದರಲ್ಲಿ ಹೇಳುವ ಚಿಕಿತ್ಸೆಯು ಮದ್ಯ, ಮಾಂಸ, ಮಧು ವರ್ಜಿತವೆಂದೂ ಒಂದು ಪದ್ಯದಲ್ಲಿ ಹೇಳುತ್ತಾನೆ.

**ಸುಕರಂ ತಾನೆನೆ ಪೂಜ್ಯಪಾದ ಮುನಿಗಳ್ ಮುಂ ಪೇಳ್ದ ಕಲ್ಯಾಣ ಕಾ ।**
**ರಕಮಂ ಬಾಹಟ ಸಿದ್ಧಸಾರ ಚರಕಾದ್ಯುತ್ಕೃಷ್ಟಮಂ ಸದ್ಗುಣಾ ॥**
**ಧಿಕಮಂ ವರ್ಜಿತ ಮದ್ಯ, ಮಾಂಸ, ಮಧುವಂ ಕರ್ನಾಟದಿಂ ಲೋಕ ರ ।**
**ಕ್ಷಕಮಂ ಚಿತ್ರಮದಾಗೆ ಚಿತ್ರಕವಿಸೋಮಂ ಪೇಳ್ದನಿಂತಳ್ತಿಯಿಂ ॥**

ಇವನ ಚಿಕಿತ್ಸೆಯ ರೀತಿಯು ನೋಡುವಂತಹದಿದೆ:—

### ಜ್ವರೋತ್ಪತ್ತಿ

**ಮಲಸಂಗ್ರಹದಿಂದುದರಾ।ನಲನಳಿವಿಂದಾಮಚಲನೆಯಿಂ ಜ್ವರವೊಗೆಗುಂ।**
**ಕೆಲರಾತ್ರಿ ಪುರಧ್ವಂಸಿಯ ಲಲಾಟಲೋಚನದಿ ನೊಗೆದುದೆಂಬರ್ ಜ್ವರಮಂ ॥**

## ಚಿಕಿತ್ಸೆ

**ಜ್ವರದಾದಿಯೊಳುಪವಾಸಂ । ಜ್ವರಮಧ್ಯದಲ್ಲಿ ಗಂಜಿ ಪೇಳ್ದ ಕಷಾಯಂ ।**
**ಜ್ವರಪಾಕದೊಳಸ್ತಮಿತ । ಜ್ವರದೋಳ್ ಮಲಹರಣಮಿನಿತಿವಾರೋಗ್ಯ ಕರಂ ॥**

೧೨೦೦ನೇ ಇಸ್ವಿಯಲ್ಲಿ ದೇವೇಂದ್ರಮುನಿಯು **ಬಾಲಗ್ರಹ ಚಿಕಿತ್ಸೆ** ಎಂಬ ಗ್ರಂಥವನ್ನು ಬರೆದಿದ್ದಾನೆ. ಸುಮಾರು ೧೩೦೦ರಲ್ಲಿ ವೈದ್ಯಶಾಸ್ತ್ರವೆಂಬ ಗ್ರಂಥವು ದೊರೆಯುತ್ತದೆ. ಗ್ರಂಥಕರ್ತೃವಾರೋ ತಿಳಿಯುವದಿಲ್ಲ ವೈದ್ಯವನ್ನು ಹೇಳುವ ರೀತಿ ನೋಡಿ.

**“ನೇರಿಲ ಬೀಜಮಂ ನೊಲೆವಾಲಿದಲ್ಲಿ ತೇದು ಕಣ್ಗೆ ಎಚ್ಚೆ ಕಣ್ಣಬೇನೆ ಮಾಣ್ಗುಂ”**

**“ಅರಳಿ ಮೊಗರು ಅರಗು ಇವನರೆದು ಹುಳಿಮಜ್ಜಿಗೆಯಲ್ಲಿ ಕದಡಿ ಕುಡಿಯೆ ಸೂತಕಂ ನಿಲ್ವುದು”**

ಈ ವೈದ್ಯಶಾಸ್ತ್ರದ ನಂತರ **ಖಗೇಂದ್ರ ಮಣಿದರ್ಪಣವೇ** ಪ್ರಸಿದ್ಧವಾದುದು. ಇದನ್ನು ಮಂಗರಾಜನೆಂಬ ಕವಿಯು ಸು. ೧೩೬೦ರಲ್ಲಿ ಬರೆದಿರುವನು. ಇದು ವಿಷವೈದ್ಯವನ್ನು ಹೇಳುವ ಗ್ರಂಥ. ೧೬ ಅಧಿಕಾರಗಳಾಗಿ ವಿಭಾಗಿಸಲ್ಪಟ್ಟಿದೆ. ವಿದ್ವದ್ಗೋಷ್ಠಿಯಲ್ಲಿದ್ದಾಗ ಒಂದು ದಿವಸ ‘ಕನ್ನಡದಿಂ ಸಮಸ್ತಜನ ಗೋಚರಮಪ್ಪವೊಲಣ್ಣ ಪೇಳ್ವುದು ನೀ ನಮಗೆಂದು ಭವ್ಯರೊಸೆದಕ್ಕ್ರಿಯೋಳ್ ಬೆಸಗೊಳೆ’ ಈ ಕೃತಿಯಂ ಮಾಡಿದೆನೆಂದು ಹೇಳುತ್ತಾನೆ. ಗ್ರಂಥವನ್ನು ಬರೆಯುವದಕ್ಕೆ ಕಾರಣವನ್ನೂ ಭೇಷಜವು ಮೋಕ್ಷಸಾಧನವೆಂಬುದನ್ನೂ ಕವಿಯು ಬಹು ಸೊಗಸಾಗಿ ವರ್ಣಿಸಿದ್ದಾನೆ

**ಮರನಂ ಗಾಳಿಯು ದೂಳಿಯುಂ ರಜನಿಯುಂ ನೀರಾಟಮಂ ಬೇಟಮಂ ।**
**ಸುರೆಯುಂ ಸೂಳೆಯರಂ ವಿಟಾಟವಿಕರಂ ಕೊಂಡಾಡಿ ಬೆಂಡಾಗದೀ ॥**
**ಧರೆಯೋಳ್ ಸರ್ವಜನೋಪಕಾರಮೆನಲೀ ಮಂತ್ರೌಷಧಿವ್ರಾತಮಂ ।**
**ನಿರುತಂ ಭಾವಿಸಿ ಪೇಳ್ದ ಮಾನವನೆ ತಾಂ ದೇವಂ ಧರಾಚಕ್ರದೋಳ್ ॥**

ಎಂದಶೇಷ ಬುಧಜನೋಪಕಾರಾರ್ಥಂ, ಸ್ಥಾವರ ಜಂಗಮಕೃತಿಮಪ್ರಭೃತಿ, ನಾನಾವಿಷಾಪಹರಣ ಕಾರಣಮಪ್ಪ ಗ್ರಂಥಮಂ ಪೇಳಲೊಡರ್ಚಿದೇಂ

ನರರ್ಗರುಜತೆ ಭೇಷಜದಿಂ। ದರುಜತೆಯಿಂ ದೇಹದೇಹದಿಂದಂ ಜ್ಞಾನಂ।
ಪರಮಜ್ಞಾನದೆ ಮೋಕ್ಷಂ। ದೊರೆಕೊಳ್ಗುಮದೆಂದು ಪೇಳ್ದಪೆಂ ಭೇಷಜಮಂ॥

ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯವನ್ನು ಕೆಳಗಿನ ಪದ್ಯದಲ್ಲಿ ಹೇಳಿದ್ದಾನೆ.

ಉರಗ ಮೃಗ ಮೂಷಿ ವೃಶ್ಚಿಕ। ಸುರೆ ಕೀಟಕಮುಂ ಕುಧಾನ್ಯ ತಂಬುಲ ಕನಕಂ।
ನಿರುಪಮಮಿತ, ಕೃತಿಮಂಗಳ್। ಪರಿಕಿಪೊಡಿವುದಶವಿಧಂ ವಿಷಗಳೆನಿಕ್ಕುಂ॥

ವಿಷಯವು ವೈದ್ಯವಾದರೂ ಪದ್ಯಗಳು ಲಲಿತವಾಗಿಯೂ ಧಾರಾಳವಾಗಿಯೂ ಇವೆ, ಬಂಧವು ಪ್ರೌಢವಾಗಿದೆ.

ಈತನ ನಿದಾನ ಚಿಕಿತ್ಸೆಗಳನ್ನು ನೋಡಿ:—

## ವಿಷದೋಷದ ಲಕ್ಷಣ

ಅತಿಸಾರಂ, ಮೂರ್ಛೆ, ದಾಹಂ, ಮತಿವಿಕಳತೆಯುಂ, ಭ್ರಾಂತಿ ಹೃತ್ಶೂಲೆ ತಾಪಂ।
ಗತಸತ್ವಂ, ನೇತ್ರಮಾಂದ್ಯಂ ಪ್ರಕೃತಿವಿಕೃತಿಯುಂ, ಗದ್ಗದಧ್ವಾನ ಕಂಠ॥
ಗತಿಭಂಗಂ ಶ್ವಾಸಕಾಸಂ ರುಧಿರವಮನುಮಂ ಸ್ವೇದಮತ್ಯಂತ ಖೇದಂ।
ಧೃತಕೋಪಂ, ತಾಮಿವೆಲ್ಲಂ ವಿಷಮುತರನೆನಿಪ್ಪಂಗ ಚಿಹ್ನಂಗಳಕ್ಕುಂ॥

## ಚಿಕಿತ್ಸೆ

ವಮನೋಪವಾಸಮಂತ್ರ। ಕ್ರಮದಿಂ ಮಾಡಿಸಿ ಮಲಾಪಹರಣ ಮನಿಂಬಿಂ।
ಸಮನಿಸಿ ಬಳಿಕ್ಕಮುವರ್ಗಂ ಬೆರ। ದು ಮಹಾಭೇಷಜಮನೀಯುವಿಷ ಮರಹಕ್ಕುಂ॥

ವೈದ್ಯಾಮೃತದ ಕರ್ತೃವಾದ ಶ್ರೀಧರದೇವನು (೧೫೦೦) ಪ್ರಸಿದ್ಧ ವೈದ್ಯನು. ಇವನ ಗ್ರಂಥವು ಚಂಪೂ ರೂಪವಾಗಿದೆ. ಇದರಲ್ಲಿ ೨೪

ಗಳವೆ ಹಲವೆಡೆಗಳಲ್ಲಿ ಚಿಕಿತ್ಸೆಗೆ ಮಂತ್ರಗಳೂ ಹೇಳಿದ್ದುಂಟು. " ಜಗದೇಕ ಮಹಾಮಂತ್ರವಾದಿ ಶ್ರೀಧರದೇವ ವಿರಚಿತಮಪ್ಪ ವೈದ್ಯಾಮೃತದೊಳ್" ಎಂದು ಪ್ರತಿಯೊಂದು ಅಧಿಕರಣದ ಕೊನೆಯಲ್ಲಿ ಹೇಳುತ್ತಾನೆ. ಇದರಲ್ಲಿ ಗದ್ಯವೇ ಹೆಚ್ಚಿದೆ.

## ಪಂಚಗುಲ್ಮ ಅತಿಚಾರಕ್ಕೆ

**ಸೂರಣ, ಮಂಗುರವಳ್ಳಿ, ಚಿತ್ರಮೂಲಿ, ಕುಸ್ತುಂಬರಿ ಇನಿತುಮಂ ಅಳಿಯುಲಾಗಲಿ, ಅಂಬಿಲದಾಗಲಿ ಅಷ್ಟಾವಶೇಷಂ ಮಾಡಿ ಕೊಳಲೊಡಂ ಪಂಚಗುಲ್ಮ ಅತಿಚಾರ ಕೆಡುಗು.**

ಸಾಳ್ವನ **ವೈದ್ಯಸಾಂಗತ್ಯವು** (೧೫೫೦) ಪ್ರಸಿದ್ಧವಿದೆ. ಈತನು **ಆನಂದಭೈರವೀ** ರಸವನ್ನು ಸಿದ್ಧಪಡಿಸುವ ಕ್ರಮವನ್ನು ಹೇಳುತ್ತಾನೆ.

**ವರಜಾಯಿಕಾಯಿ ಸೈಂಧವ ಮಿಂಗಿಲಿಕ ಶುಂಠಿ । ಮರಿಚ ಲವಂಗವು ನಾಭಿ ।**
**ಉರುವ ಕನಕ ಬೀಜ ಹಿಪ್ಪಲಿ ಸಮಭಾಗ । ಕರಿಯ ದುತ್ತೂರದ ರಸದಿ ॥**
**ಅರೆವುದು ಮೂರು ದಿವಸ ಗುಂಜಿಗಾತ್ರಕ್ಕೆ । ನೆರೆ ಗುಳಿಗೆಯನು ಕಟ್ಟುವುದು ॥**
**ಪರಿವಿಡಿಯಿಂದೆ ಯಾನಂದಭೈರವಿಯೆಂಬ। ಉರುವ ಪೆಸರ ಪಡೆದಿಹುದು॥**

ಇದರ್ಕೆ ಅನುಪಾನಂ

**ಇಂತು ಕೆಂಗೊಳಿಸುವಾನಂದಭೈರವಿಯನು । ಸಂತಸದಿಂ ತ್ರಿಕಟುಕದಿ ।**
**ಚಿಂತೆಯ ಬಿಟ್ಟು ಕೊಳ್ಳಲು ವಾತವೆಂಭತ್ತು । ಭ್ರಾಂತುವೆತ್ತಿರದೋಡುವುವು ॥**
**ಸಲೆ ಮೂಲ ಸಹಿತ ಹೂಲಿಯ ರಸದಿಂ ಕೊಳ್ಳೆ । ತೊಲಗುಗುಂ ಶ್ಲೇಷ್ಮ ದೋಷಗಳು ।**
**ನೆಲೆಗೊಂಡ ಶೂಲೆಗೆ ಗದುಗಿನ ತಿರುಳಿಂದ । ಸಲೆ ಕೊಳ್ಳೆ ಕೆಟ್ಟುಹೋಗುವುದು ॥**
**ಎಲವದ ಹಗಿನದೊಳಜ ಮೋದದಿಂ ಕೊಳ್ಳೆ । ನೆಲೆಗೆಡುವುವು ಗ್ರಹಿಣಿಗಳು ॥**

**ಸಲೆ ಚಾಯಿಕಾಯಿ ಜೀರಗೆ ದಧಿಯಿಂ ಕೊಳ್ಳೆ । ಯಳವುಗೆಡುವುದತಿ ಸಾರ ||**

೧೫೭೦ರಲ್ಲಿ **ವೈದ್ಯಸಾರ ಸಂಗ್ರಹ**ವೆಂಬ ಚೆನ್ನರಾಜನ ಗ್ರಂಥವು ಪ್ರಸಿದ್ಧವಿದೆ. ಚಿಕ್ಕುಪಾಧ್ಯಾಯನು (೧೬೭೨) ವೈದ್ಯಾಮೃತಕ್ಕೆ ಟೀಕೆಯನ್ನು ಬರೆದಿದ್ದಾನೆ. ನಂಜಭೂಪಾಲನು (೧೭೦೦) **ವೈದ್ಯಸಾರಸಂಗ್ರಹ**ವೆಂಬ ಗ್ರಂಥವನ್ನು ಬರೆದಿದ್ದಾನೆ. ವೀರರಾಜನ (೧೭೨೦) **ವೈದ್ಯಸಂಹಿತಾಸಾರಾರ್ಣವ** ಎಂಬ ಗ್ರಂಥವು ಪ್ರಸಿದ್ಧವಿದೆ. ೧೭೫೦ ರಲ್ಲಿ ಬ್ರಹ್ಮನೆಂಬ ಕವಿಯು **ವೈದ್ಯಕೆಂದ**ವೆಂಬ ಗ್ರಂಥವನ್ನು ಬರೆದಿದ್ದಾನೆ. ವೈದ್ಯಶಾಸ್ತ್ರವು ಋಗ್ವೇದಕ್ಕೆ ಉಪವೇದವಾದ ಆಯುರ್ವೇದವೆಂದೂ ಅದನ್ನು ಚೆನ್ನಾಗಿ ಕಲಿತು ಚಿಕಿತ್ಸೆ ಮಾಡಿದರೆ ದೋಷವಿಲ್ಲೆಂದೂ ಕವಿಯು ಹೇಳುತ್ತಾನೆ. ಅವನ ರೀತಿಯನ್ನು ನೋಡಿ:—

**ತೊಲೆ ಹಿಪ್ಪಲಿಯನು ಹುರಿವುದು । ತಿಲತೈಲದಿ ಕಲ್ಲುಸಕ್ಕರೆಯ ಕೂಡಿಸುತಂ ।**

**ಬಲುಹುರುಳಿಯ ಕಟ್ಟನೊಳು । ಕಲಸುತ ಕೊಡಲೊಡನೆ ಕೆಡುವುದಡಸಿದಶ್ವಾಸ ||**

ತಿಮ್ಮರಾಜಗೌಡನ **ಸ್ತ್ರೀವೈದ್ಯವು** ಪ್ರಸಿದ್ಧವೇ ಇದೆ. ಇದು ತೀರ ಚಿಕ್ಕ ಗ್ರಂಥವು. ೫ ಓಲೆಗಳಿವೆ. ಇದಲ್ಲದೆ ವ್ರಣವೈದ್ಯ ಮೊದಲಾದ ಗ್ರಂಥಗಳೂ ಇವೆ. ಆಧುನಿಕ ಡಾಕ್ಟರರು ಈ ಗ್ರಂಥಗಳ ಶೋಧವನ್ನು ಮಾಡಿ, ಕನ್ನಡ ಆಯುರ್ವೇದವನ್ನು ಪ್ರಸಿದ್ಧಿಸುವದು ಅವಶ್ಯವಿದೆ. ಹಳೆಯ ಓಲೆಯ ಕಡತಗಳಿದ್ದಲ್ಲಿ ಸಂಶೋಧಿಸುತ್ತಿರುವಾಗ ಬೇರೆ ಬೇರೆ ವ್ಯಕ್ತಿಗಳು ಬರೆದಿಟ್ಟ ಅನುಭವ ವೈದ್ಯಸಂಗ್ರಹದ ಪುಸ್ತಕಗಳು ಹಲವು ಕಡೆಗೆ ದೊರೆಯುತ್ತವೆ.

## ಹಸ್ತ್ಯಾಯುರ್ವೇದ ಅಥವಾ ಗಜಶಾಸ್ತ್ರ

ಶಿವಮಾರದೇವನು (೮೦೦) **ಶಿವಮಾರಮತ**ವೆಂಬ ಗಜಶಾಸ್ತ್ರವನ್ನು ರಚಿಸಿದಂತೆ ನಗರದ ೩೫ನೆಯ ಶಾಸನದಿಂದ ತಿಳಿಯುತ್ತದೆ. ಸು. ೧೬೦೦ರಲ್ಲಿ ಪಾಲಕಾಪ್ಯಕೃತ ಹಸ್ತ್ಯಾಯುರ್ವೇದಕ್ಕೆ ವೀರಭದ್ರರಾಜನು

ಕನ್ನಡ ಟೀಕೆಯನ್ನು ಬರೆದಿದ್ದಾನೆ. ಈ ಗ್ರಂಥವು ಪೂರ್ಣವಾಗಿ ದೊರೆತಿಲ್ಲ. ವೈದ್ಯನು ಹೇಗಿರಬೇಕೆಂಬುದನ್ನು ಕೆಳಗಿನಂತೆ ವರ್ಣಿಸುತ್ತಾನೆ.

“ ಆರು ಕೆಲವರು ಚಿಕಿತ್ಸೆ ಮಾತ್ರವನೆ ಪಠಿಸಿ, ಅನುವಾಸನ ನಿರೂಹ ಉತ್ತರ ವಸ್ತಿ ವಿರೇಕ ವಿಧಿಶಿರೋವಿರೇಚನ ಉಪಚಾರಂಗಳನರಿಯದೆ ವೈದ್ಯಮಂ ಮಾಡುವವರು ಹೇಡಿ ಹುಯ್ಯಲ ಹೊಕ್ಕಂತೆ..............ನಾಲ್ಕು ಸ್ಥಾನವನು ಬಲ್ಲಾತನಿಂದ ಚಿಕಿತ್ಸೆಯಂ ಮಾಡಿಸುವುದು. ಚಿಕಿತ್ಸೆಯನು ಪಠಿಸದೆ ಪರಿಚಾರವ ಪಠಿಸಿದವರು ಯೋಗ್ಯರಲ್ಲ. ಪರಿಚಾರವನು ಪಠಿಸದೆ ಇದ್ದವರು ಆನೆಗಳ ಸಾಧ್ಯಾಸಾಧ್ಯವನರಿಯರು.........” ಇತ್ಯಾದಿ.

## ಅಶ್ವ-ಶಾಸ್ತ್ರ-ವೈದ್ಯ

ಅಭಿನವಚಂದ್ರ (೧೪೦೦) ನೆಂಬ ಕವಿಯು **ಅಶ್ವಶಾಸ್ತ್ರ**ವನ್ನು ಬರೆದಿದ್ದಾನೆ. ಇದರಲ್ಲಿ ೧೬ ಅಧ್ಯಾಯಗಳಿವೆ. ೮೮೮ ಪದ್ಯಗಳಿವೆ. ಅಶ್ವಗಳ ಲಕ್ಷಣಗಳು ಹೇಳಲ್ಪಟ್ಟಿವೆ. ಅವುಗಳ ರೋಗ ಚಿಕಿತ್ಸೆಯೂ ವರ್ಣಿಸಲ್ಪಟ್ಟಿದೆ:—

### ಒಳ್ಳೇ ಕುದುರೆಯ ಲಕ್ಷಣ

**ತೆರೆಯಿಲ್ಲದೆ ಸೆರೆಯಿಲ್ಲದೆ । ನರೆಯಿಲ್ಲದೆ ಕಿರಿಯುವಾಗಿ ತೆಳ್ಪನೆ ಮೊನೆಯಾ।**
**ಗಿರೆ ಕಿವಿಗಳೊಳಗೆ ನುಣ್ಪಾ । ಗಿರೆ ಕಟವುಂ ವಿಕಟಮಾಗದಿರೆ**
**ಹರಿಶುಭದಂ ॥**

### ಸರ್ವಶೂಲೆಗಳಿಗೆ

**ಶೃಂಗಿಯ ಬೇರುಂ ವಾಣಿಜ । ದಿಂಗುಂ ಬೆಳ್ಳುಳ್ಳಿ ತಿಗಡೆ ಸೈಂಧವಮಾಪಂ।**
**ಚಾಂಗಮುಮಂ ಸಮನಾಗಿ ತು।ರಂಗಕ್ಕಿಕ್ಕುವುದು ಸರ್ವಶೂಲಾಪಹರಂ॥**

ಅಭಿನವಚಂದ್ರನ ನಂತರ ಪ್ರಸಿದ್ಧ ಅಶ್ವಶಾಸ್ತ್ರಕಾರನೆಂದರೆ ರಾಮಚಂದ್ರನೇ (೧೬೨೫). ಇವನು ಶಾಲಿಹೋತ್ರನ ಅಶ್ವಶಾಸ್ತ್ರಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ. ‘ ಶಾಲಿಹೋತ್ರನು ಹೇಳಿದ ಶಾಸ್ತ್ರಕ್ರಮದಿಂದ ಬಾಲಕರರಿವಂತೆ, ಸಾಂಗೋಪಾಂಗವಾಗಿ ಕನ್ನಡಿಸಿದೆಂ ’ ಎಂದು

ಕವಿಯು ಹೇಳುವನು. ಇದು ಗದ್ಯರೂಪವಾಗಿದೆ. ಇದರಲ್ಲಿ ಕುದುರೆಗಳ ವಯಸ್ಸು, ಹಲ್ಲುಸುಳಿ, ವ್ಯಾಧಿಗಳಿಗೆ ಚಿಕಿತ್ಸೆ ಮುಂತಾದ ವಿಷಯಗಳು ಹೇಳಿವೆ. ಪದ್ಮಣ ಪಂಡಿತನ (೧೬೨೭) **ಹಯಸಾರ ಸಮುಚ್ಚಯವು** ಕಂದಪಲ್ಲಿದೆ. ಅದರಲ್ಲಿ ೨೦ ಅಧ್ಯಾಯಗಳಿವೆ. ಗ್ರಂಥ ಸಂಖ್ಯೆ ೮೦೦೦. ಇದರಲ್ಲಿ ಕುದುರೆಗಳ ಆಕೃತಿ, ಲಿಂಗ, ಭೇಷಜ ಇವು ನಿರೂಪಿಸಲ್ಪಟ್ಟಿವೆ.

## ಗೋವೈದ್ಯ

ಕೀರ್ತಿವರ್ಮನು (೧೫೭೫) **ಗೋವೈದ್ಯವನ್ನು** ಬರೆದಿರುವನು. ಇದು ಗದ್ಯಪದ್ಯ ರೂಪವಾಗಿದೆ. ಪೂರ್ಣ ಪ್ರತಿಯು ದೊರೆತಿಲ್ಲ. ಗೋವುಗಳ ವ್ಯಾಧಿಗಳಿಗೆ ಔಷಧಗಳೂ ಯಂತ್ರಗಳೂ ಬರೆಹಾಕುವ ಕ್ರಮಗಳೂ ವಿಸ್ತಾರವಾಗಿ ಹೇಳಲ್ಪಟ್ಟಿವೆ.

## ಜ್ಯೋತಿಶ್ಶಾಸ್ತ್ರ

ಜ್ಯೋತಿಷ ಶಾಸ್ತ್ರದ ಗ್ರಂಥಗಳು ಕನ್ನಡದಲ್ಲಿ ೧೧ನೇ ಶತಮಾನದಿಂದಲೇ ದೊರೆಯುತ್ತವೆ. ಫಲಜ್ಯೋತಿಷವೂ ಶಕುನಗಳೂ ಈಗ ದೊರೆತಿರುವ ಗ್ರಂಥಗಳಲ್ಲಿ ಹೆಚ್ಚಾಗಿವೆ. ಗ್ರಹಗಣಿತವೂ ವರ್ಣಿಸಲ್ಪಟ್ಟಿದೆ. ಇವುಗಳ ಇತಿಹಾಸವು ಇಂತಿದೆ.

ಶ್ರೀಧರಾಚಾರ್ಯನ (೧೦೪೯) **ಜಾತಕ ತಿಲಕವೇ** ಕನ್ನಡದಲ್ಲಿ ಮೊದಲಿನದೆಂದು ತೋರುತ್ತದೆ. ಇವನು ಬೆಳುವಲ ನಾಡಿನಲ್ಲಿರುವ **ನರಗುಂದದವನು.** 'ಇದುವರೆಗೂ ಕನ್ನಡದಲ್ಲಿ ಜ್ಯೋತಿಷವನ್ನು ಯಾರೂ ಬರೆದಿಲ್ಲ. ನೀನು ಜಾತಕ ತಿಲಕವನ್ನು ಬರೆ' ಎಂದು ವಿದ್ವಾಂಸರು ಹೇಳಲು ಈ ಗ್ರಂಥವನ್ನು ಬರೆದಂತೆ ಕವಿಯು ಹೇಳುತ್ತಾನೆ. ಇದನ್ನು ಬಾಹುಬಲಿಯು (೧೫೬೦)

**ಜ್ಯೋತಿಷ ವಿದ್ಯೆಗೆ ಮೊದಲಿಗ ಸಲೆ ವಾದಿ । ವ್ರಾತ ಭಯಂಕರನೆನಿಪ ।**
**ಖ್ಯಾತಿಗೆ ನೆಲೆಯಾದ ಶ್ರೀಧರಾಚಾರ್ಯರ । ಪ್ರೀತಿ ಮಿಗೆ ಬಲಗೊಂಬೆ ॥**

ಎಂದು **ನಾಗಕುಮಾರನ ಕಥೆಯ** ಆದಿಭಾಗದಲ್ಲಿ ಹೇಳುತ್ತಾನೆ.

ಜಾತಕ ತಿಲಕದಲ್ಲಿ ಕಂದ ಹಾಗು ವೃತ್ತಗಳಿವೆ. ಇದರಲ್ಲಿ ಕೆಳಗಿನ ೨೪ ವಿಭಾಗಗಳಿವೆ. ಸಂಜ್ಞಾ, ಬಲಾಬಲ, ಗರ್ಭ, ಜನ್ಮ, ತಿರ್ಯಗ್ಜನ್ಮ, ಅರಿಷ್ಟ, ಅರಿಷ್ಟ ಭಂಗ, ಆಯುರ್ದಾಯ, ದಶಾಂತರ್ದಶಾ, ಅಷ್ಟಕ ವರ್ಗ, ಜೀವರಾಜಯೋಗ, ನಾಭಿ ಸಂಯೋಗ, ಚಂದ್ರಯೋಗ, ದ್ವಿತ್ರಿಯೋಗ, ದೀಕ್ಷಾಯೋಗ, ರಾಶಿ, ಲಗ್ನಭಾವ, ದ್ರೇಕ್ಕಾಣ, ದೃಷ್ಟ ಅನಿಷ್ಟ, ಸ್ತ್ರೀ ಜಾತಕ, ನಿರ್ಯಾಣ, ನಷ್ಟಜಾತಕ. ಜ್ಯೋತಿಷದ ಪ್ರಯೋಜನವನ್ನು ಕವಿಯು ಈ ರೀತಿ ಹೇಳುತ್ತಾನೆ:—

**ಭವಬದ್ಧ ಶುಭಾಶುಭ ಕ । ರ್ಮವಿಪಾಕದ ಫಲವನರಿಪುಗುಂ ಜ್ಯೋತಿಜ್ಞಾ ।**
**ನವದೆಂತೆನೆ ಕತ್ತಲೆವನೆ । ಯು ವಸ್ತುವಂ ತೋರ್ಪ ಸೊಡರ ಬೆಳಗಿನ ತೆರದಿಂ ॥**

## ಗ್ರಹಬಲ

**ಶನಿಯಿಂದಂ ಮಹಿಜಾತನಾ, ಮಹಿಜನಿಂದಂ ಸೌಮ್ಯನಾ ಸೋಮನಂ ।**
**ದನನಿಂದಂ ಗುರುವಾ, ಸುರೇಂದ್ರ ಗುರುವಿಂದಂ ಶುಕ್ರನಾ ಶುಕ್ರನಿಂ ॥**
**ವನಜಾತಾಹಿತನಾ ವನೇಜ ರಿಪುವಿಂ ಪಂಕೇಜಮಿತ್ರಂ ಬಳಾ ।**
**ಢ್ಯನೆನಿಕ್ಕುಂ ಕ್ರಮದಿಂದಮಿಗ್ರಹಬಳಂ ನೈಸರ್ಗಿಕಂ ನಾಮದಿಂ ॥**

ಈ ಗ್ರಂಥವು ವಿಸ್ತಾರವಾಗಿದೆ. ಕವಿತೆಗಳು ಪ್ರೌಢವಾಗಿವೆ. ಹೇಳುವ ರೀತಿ ಸೊಗಸಾಗಿದೆ.

ಶ್ರೀಧರಾಚಾರ್ಯರ ನಂತರ ಚಾವುಂಡರಾಯ (೧೦೫೦) ನ **ಲೋಕೋಪಕಾರ**ವೆಂಬ ಗ್ರಂಥವು ಕಾಣುತ್ತದೆ. ಇದು ಪೂರ್ಣವಾಗಿ ದೊರೆತಿಲ್ಲ. ೫-೬ನೆಯ ಆಶ್ವಾಸಗಳು ಮಾತ್ರ ದೊರೆತಿವೆ. ಇವುಗಳಲ್ಲಿ ೫ನೇ ಆಶ್ವಾಸದಲ್ಲಿ ಉದಕಾರ್ಗಳ ವರ್ಣನವೂ ೬ನೆಯದರಲ್ಲಿ ಸ್ತ್ರೀ-ಪುರುಷರ **ಸಾಮುದ್ರಿಕ ಲಕ್ಷಣವೂ** ಇವೆ.

## ನೀರಿರುವ ಸ್ಥಳದ ಲಕ್ಷಣ

**ತುರುಗಿ ತಳಿರ್ತು ಪೂತು ಫಲಮಾದೆಲೆಯಿಕ್ಕಿದ ಕೊಂಬುಗಳ್ ನೆಲ ।**
**ಕ್ಕೊರಗಿದ ನುಣ್ಪುವೆತ್ತ ಮರನುಳ್ಳೆಡೆಯೊಳ್ ಜಲಮುಕ್ಕುಮಲ್ಲಿ ಯೆಂ ॥**

**ದರಿವುದು ತಾರಿದಂಬಿದ ನರುಂಕಿದ ಕೊಂಬೊಣಗಿರ್ದ ಪೂಟೆಯೆ ।**
**ಳ್ದೊರಗಿದ ವೃಕ್ಷದಿಂದರಿವುದಾಯೆಡೆಯೊಳ್ ಜಲವಾಗದೆಂಬುದಂ ॥**
**ಪುಲ್ಲಿಲ್ಲದ ನೆಲದೊಳ್ ಪಸು । ವುರ್ಲ್ಲಾದೊಡವುಲ್ಲದಂದು**
**ಪುಲ್ಲುಳ್ಳೆಡೆಯೊಳ್ ॥**
**ಪುಲ್ಲಿನಿತು ಮಿಲ್ಲದಿರ್ದೊಡ । ಮಲ್ಲಿಯೆ ನೀರಕ್ಕುಮಲ್ಲಿ ಮೇಣ್**
**ನಿಧಿಯಕ್ಕುಂ ॥**

ಸುಮಾರು ೧೩೦೦ರಲ್ಲಿ ರಟ್ಟಕವಿ(ಅರ್ಹದಾಸ)ಯಿಂದ **ರಟ್ಟಮತ**ವೆಂಬ ಗ್ರಂಥವು ಬರೆಯಲ್ಪಟ್ಟಿದೆ. ಇದು ಪೂರ್ಣವಾಗಿ ದೊರೆತಿಲ್ಲ. ಅಸಮಗ್ರಪ್ರತಿಯಲ್ಲಿ ವೃತ್ತ, ಕಂದ, ರಗಳೆ, ಅಕ್ಕರ, ತ್ರಿಪದಿ ಎಲ್ಲಾ ಸೇರಿ ೯೦೦ ಪದ್ಯಗಳಿವೆ. ಇದರಲ್ಲಿ, ಕೆಳಗಿನ ವಿಷಯಗಳಿವೆ.

ಮಳೆಯ ಕುರುಹು, ಆಕಸ್ಮಿಕ ಲಕ್ಷಣ, ಶಕುನ, ವಾಯುಚಕ್ರ, ಗೋಪ್ರವೇಶ, ಭೂಕಂಪ, ಭೂಜಾತಫಲ, ಮಳೆಯ ಸಯು, ಉತ್ಪಾತ ಲಕ್ಷಣ, ಪರಿವೇಷ ಲಕ್ಷಣ, ಇಂದ್ರಧನುರ್ಲಕ್ಷಣ, ಪ್ರಥಮ ಗರ್ಭಲಕ್ಷಣ, ದ್ರೋಣ ಸಂಖ್ಯೆ, ಮಿಂಚಿನ ಲಕ್ಷಣ, ಪ್ರತಿಸೂರ್ಯ ಲಕ್ಷಣ, ಸಂವತ್ಸರ ಫಲ, ಗ್ರಹಂಗಳ ಪಗೆಕೆಳೆ,'! ಮೇಘಗಳ ನಾಮಕುಲ ವರ್ಣಧ್ಯಾನ ವಿಚಾರ, ದೇಶ ವೃಷ್ಟಿ, ಮಾಸಫಲ, ರಾಹುಚಕ್ರ, ನಕ್ಷತ್ರ ಫಲ, ಬಿತ್ತುವ ಶಕುನ, ಉದಕಾರ್ಗಳ, ಸಂಕ್ರಾಂತಿ ಫಲ.

ಇವೆಲ್ಲವುಗಳನ್ನು ನೋಡಿದರೆ, ಜ್ಯೋತಿಷ್ಕನ ಸ್ಥಾನವು ಸಮಾಜದಲ್ಲಿ ಯಾವುದಿತ್ತೆಂಬುದು ಒಡೆದು ಕಾಣುವದು.

## ಮಳೆಯ ಲಕ್ಷಣ

**ಜಲಜಸಖ, ಬಿಂಬ ಮೃತ್ಯು । ಜ್ವಲ ಮಪ್ಪೊಡೆವಾಯುಪವನನೊಳ್**
**ಬೀಸುವೊಡಂ ।**
**ಜಲದಂಗಳ ರುಚಿಗಳ್ ನಿ । ರ್ಮಳಮಪ್ಪೊಡಮಧಿಕವೃಷ್ಟಿಯಕ್ಕುಂ**
**ರಟ್ಟಾ ॥**

ಲಕ್ಷ್ಮಣಾಂಕನು (೧೫೦೦) **ಶಕುನಸಾರ**ವೆಂಬ ಗ್ರಂಥವನ್ನು ಬರೆ

ದಿದ್ದಾನೆ. ಇದು ವೃತ್ತದಲ್ಲಿದೆ. ೮ ಅಧಿಕಾರಗಳಿವೆ. ೩೬೨ ಪದ್ಯಗಳಿವೆ. ರಾಜ್ಯ, ಓಲಗ, ಯಾತ್ರೆ, ಲಾಭ, ಮಳೆ, ಫಲಾರ್ಘ, ವಿವಾಹ, ಗರ್ಭ, ಪುತ್ರೋತ್ಪತ್ತಿ, ಜಯ, ಆಕಸ್ಮಿಕ ಕಾಲ ಇತ್ಯಾದಿ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಇದೇ ಸುಮಾರಿಗೆ ಚಾಕರಾಜನು **ಶಕುನ ಪ್ರಪಂಚ** ವೆಂಬ ಗ್ರಂಥವನ್ನು ಬರೆದಿದ್ದಾನೆ. ಇದು ಕಂದವೃತ್ತಗಳಲ್ಲಿದೆ. ಇದರಲ್ಲಿ ೨೫೦ ಅಧ್ಯಾಯಗಳಿದ್ದು ೬೨೦ ಪದ್ಯಗಳಿವೆ. ಇದಕ್ಕೆ ಪಿಂಗಲಿಯ ಶಾಸ್ತ್ರ, ಪಿಂಗಲಿಯ ಶಕುನ ಎಂಬ ಹೆಸರುಗಳೂ ಉಂಟು. 'ಪಿಂಗಲಿಯ ಶಾಸ್ತ್ರಾಸೀಕ ಸಾರಂಗಳಂ ಪೇಳ್ವೆಂ' ಎಂದು ಗ್ರಂಥವನ್ನು ಕವಿಯು ಪ್ರಾರಂಭಿಸುವನು. ಇದರಲ್ಲಿ ಇರುವ ವಿಷಯಗಳನ್ನು ಕವಿಯು ಈ ರೀತಿಯಾಗಿ ಹೇಳುವನು.

**ಸ್ವರವಾಕಸ್ಮೀಕ ಚೇಷ್ಟಾಗತಿಸುಮುದಯಮಂ ರಾಜ್ಯಮುಂ ಸೇವೆಯುಂ ಬಂ ।**
**ಧುರ ವೃಷ್ಟ್ಯರ್ಘಂ ವಿವಾಹಂ ಬೆಳೆ ರುಜೆ ಗಮನಂ ಗರ್ಭಮುಂ ದ್ಯೂತ ನಷ್ಟಂ ।**

**ವರಚೋರಂ ಬಂಧನಂ ಭೋಜನಮತಿಶಯನಿಕ್ಷೇಪಮೆಂದೆಂಬ ನಾನಾ ॥**
**ಪರಿಯಿಂ ಸರ್ವಾಧಿಕಾರಂಗಳನೆ ಶಕುನದಿಂ ಪೇಳ್ದನೀ ಚಾಕರಾಜಂ ॥**

## ಮದುವೆಯಾಗುವ ಲಕ್ಷಣ

**ಮದುವೆಯ ಗ್ರಹದೋಳ್ ಪಕ್ಕಿಯು । ಮುದದಿಂ ಶಿಖಿರವದಿನಂತರಾಳದಿ ಕೂಗಲ್ ।**

**ಮದುವೆಯುಮಕ್ಕುಂ ಕಡೆಯೊಳ್ । ಮದವಳಿಗೆಯು ಬೇರದೋರ್ವಗಂ ವಧುವಪ್ಪಳ್ ॥**

ಗಂಗಾಧರನೆಂಬ ಕವಿಯು (೧೫೫೦) **ರಟ್ಟಿನ ಜಾತಕವೆಂಬ** ಜೋತಿಷ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ೧,೨೦ ಪದ್ಯಗಳಿವೆ. ಪ್ರಶ್ನಭಾಗ, ಗ್ರಹಗಳಿಗೆ ಷಡ್ಬಲ, ಜಾರಪುತ್ರ ಲಕ್ಷಣ, ಆಯುರ್ದಾಯ ಮುಂತಾದ ವಿಷಯಗಳಿವೆ.

## ಆನಾವ ಜಾತಿಗಳಿಗೆ ಬಲರಾರು ?

**ಗುರಭೃಂಗುಜರ್ ಬ್ರಾಹ್ಮಣರಂ । ಬುರುಹಪ್ರಿಯಭೌಮರರಸುಮಕ್ಕಳ್**
**ಚಂದ್ರಂ ॥**
**ಪರದಂಬುದನೊಕ್ಕಲಿಗಂ । ಸರಸಿಜಹಿತಸೂನು ಮಿಶ್ರಜಾತಿಯುನಾಳ್ಗಂ ॥**

ಸುಮಾರು ೧೬೦೦ರಲ್ಲಿ **ಸಾಮುದ್ರಿಕೆ ಲಕ್ಷಣ**ವೆಂಬ ಗ್ರಂಥವು ಪ್ರಸಿದ್ಧವಾಗಿದೆ. ಬರೆದವರು ಯಾರೆಂಬುದು ತಿಳಿಯುವದಿಲ್ಲ. ಇದೇ ಸಮಯಕ್ಕೆ **ಶಕುನಗಳು** ಎಂಬ ಗ್ರಂಥವೂ ಹುಟ್ಟಿದೆ. ಇದರಲ್ಲಿ ಹಲ್ಲಿಯ ಶಕುನ, ಹಸುವಿನ ಶಕುನ, ಗಾರ್ಧಭ ಶಕುನ, ಸರ್ಪ ಶಕುನ, ಸೀನಿನ ಫಲ, ಕಣ್ಣುಹಾರಿದ ಫಲ, ಗೌಳಿ ಬಿದ್ದ ಫಲ, ಜೇನು ಇಕ್ಕಿದ ಫಲ, ಸ್ವರ ಮುಂತಾದ ವಿಷಯಗಳು ಹೇಳಲ್ಪಟ್ಟಿವೆ.

## ಕಾಗೆ ಹೆಜ್ಜೆಯಿಕ್ಕಿದ ಫಲ

ಶಿರದೊಳು ಮೃತ್ಯು, ಲಲಾಟದೊಳು ಕನಕಪಟ್ಟ, ಉರದೊಳು ಭೋಜನ, ಕರ್ಣದೊಳು ಸುವರ್ಣಲಾಭ. ಇತ್ಯಾದಿ.

ಇದೇ ಸಮಯಕ್ಕೆ **ಜಿನೇಂದ್ರಮಾಲೆ**ಯೆಂಬ ಜ್ಯೋತಿಷ ಗ್ರಂಥವು ಪ್ರಸಿದ್ಧವಾಗಿದೆ. ೧೨೦ ಕಂದಗಳಿವೆ. ಬರೆದವರಾರೆಂಬುದು ತಿಳಿದಿಲ್ಲ. ಅದರಂತೆಯೇ **ಜ್ಯೋತಿಷ ಸಂವತ್ಸರ ಫಲ**ವೆಂಬ ಗ್ರಂಥವು ೧೬೫೦ರಲ್ಲಿ ಪ್ರಸಿದ್ಧವಾಗಿದೆ. ಇದು ಅನಾಮಧೇಯ. ೧೭೨೫ ರಲ್ಲಿ ದೇವನೆಂಬ ಕವಿಯು **ಶಕುನ ಪ್ರಪಂಚ**ವೆಂಬ ಗ್ರಂಥವನ್ನು ಬರೆದಿದ್ದಾನೆ. ೧೭೫೦ ರಲ್ಲಿ ಚೇಟರಾಜನು **ಮಾರ್ಕಂಡೇಯ ಪುರಾಣ**ವನ್ನು ಬರೆದಿದ್ದಾನೆ. ಇದು ಜ್ಯೋತಿಷ ಗ್ರಂಥ. ಭಾಮಿನಿಯಲ್ಲಿ ಬರೆಯಲ್ಪಟ್ಟಿದೆ. ೨೬ ಸಂಧಿಗಳಿವೆ. ೧೨೪೧ ಪದ್ಯಗಳಿವೆ. ಇದರಲ್ಲಿ ಮೃಕಂಡು ಮುನಿಯು ಮಾರ್ಕಂಡೇಯನಿಗೆ ಬೋಧಿಸಿದ ಜ್ಯೋತಿಶ್ಶಾಸ್ತ್ರವು ನಿರೂಪಿಸಿದೆ. ಇದರಲ್ಲಿ ಗ್ರಹ ಭಾವ ಲಕ್ಷಣ, ಜಾತಕ ನಿರ್ಣಯ, ಆಯುರ್ಯೋಗ, ಲಗ್ನ ಭಾವ ಫಲವೇ ಮೊದಲಾದ ೧೨ ಭಾವಫಲಗಳೂ ಗ್ರಹದಶಾಫಲ ಮೊದಲಾದ ವಿಷಯಗಳೂ ಹೇಳಿವೆ.

ಸರ್ವಜ್ಞನು ತನ್ನ ವಚನಗಳಲ್ಲಿ ಜ್ಯೋತಿಷವನ್ನು ಕುರಿತು ಒಂದು ಪದ್ಧತಿಯನ್ನೂ ವೈದ್ಯವನ್ನು ಕುರಿತು ಒಂದು ಪದ್ಧತಿಯನ್ನೂ ಬರೆದಿದ್ದಾನೆ.

ಕರ್ನಾಟಕದಲ್ಲಿಯ ಜ್ಯೋತಿಷಿಗಳ ಲಕ್ಷ್ಯವನ್ನು ಈ ಕಡೆಗೆ ಎಳೆಯಬೇಕೆಂಬ ಉದ್ದೇಶದಿಂದ ಇಷ್ಟು ವಿಸ್ತೃತವಾಗಿ ವಿಷಯವನ್ನು ವಿವರಿಸಿದೆ.

## ಗಣಿತ ಶಾಸ್ತ್ರ

ಗಣಿತಶಾಸ್ತ್ರವು ೧೨ನೆಯ ಶತಮಾನದಲ್ಲಿಯೇ ಬೆಳೆದು ಬಂದಿತ್ತೆಂಬುದು **ರಾಜಾದಿತ್ಯನ** (೧೧೨೦) ವ್ಯವಹಾರ ಗಣಿತ, ಕ್ಷೇತ್ರ ಗಣಿತ, ವ್ಯವಹಾರ ರತ್ನ, ಲೀಲಾವತಿ, ಚಿತ್ರಹಸುಗೆ, ಜೈನ ಗಣಿತ ಟೀಕೋದಾಹರಣ ಮೊದಲಾದ ಗ್ರಂಥಗಳಿಂದ ತಿಳಿದುಬರುತ್ತದೆ. ಕನ್ನಡದಲ್ಲಿ **ಗಣಿತ ಶಾಸ್ತ್ರ**ವನ್ನು ಬರೆದಿರುವ ಕವಿಗಳಲ್ಲಿ ಇವನೇ ಮೊದಲನೆಯವನು. ಗಣಿತ ಶಾಸ್ತ್ರಕ್ಕೆ ಸಂಬಂಧಪಟ್ಟ ಬಹುತರ ಎಲ್ಲ ವಿಷಯಗಳನ್ನು ಇವನು ತನ್ನ ಗ್ರಂಥಗಳಲ್ಲಿ ಪ್ರತಿಪಾದಿಸಿದ್ದಾನೆ. ಇವನಿಗೆ ರಾಜವರ್ಮ, ಭಾಸ್ಕರ, ಬಾಚ, ಬಾಚಯ, ಬಾಚಿರಾಜ ಎಂಬ ಹೆಸರುಗಳೂ ಇದ್ದಂತೆ ತೋರುತ್ತದೆ.

**ವ್ಯವಹಾರ ಗಣಿತವು** ಗದ್ಯಪದ್ಯಾತ್ಮಕವಾಗಿದೆ. ಸೂತ್ರಗಳನ್ನು ಪದ್ಯರೂಪವಾಗಿ ಬರೆದು ಟೀಕೆಯನ್ನೂ ಉದಾಹರಣೆಗಳನ್ನೂ ಕೊಟ್ಟಿದ್ದಾನೆ. ಇದರಲ್ಲಿ ೮ ಅಧಿಕಾರಗಳಿವೆ. ಈ ಗ್ರಂಥವನ್ನು ಐದು ದಿನಗಳಲ್ಲಿಯೇ ಬರೆದೆನೆಂದು ಕವಿಯು ಹೇಳಿದ್ದಾನೆ.

**ಲೆಕ್ಕದ ಕವಿತೆಯ ಬಳ್ಕೆ ಜ । ಗಕ್ಕೆಸೆದಿರೆ ಸಕಲ ಗಣಿತವಿದ್ಯಾಗ್ರಂಥದೊಳಂ ।**
**ತೆಕ್ಕನೆ ತೀವಿರಲಯ್ದು ದಿ । ನಕ್ಕಂ ನೆರೆ ಪೇಳ್ದನಲ್ತೆ ರಾಜಾದಿತ್ಯಂ ॥**

ಈ ಗ್ರಂಥದಲ್ಲಿ ತ್ರಯರಾಶಿಕ, ಪಂಚರಾಶಿಕ, ಸಪ್ತರಾಶಿಕ, ನವರಾಶಿಕ, ಪದಪಿನ ಸೂತ್ರ, ಬಣ್ಣಾಂತರದ ಸೂತ್ರ, ಹೊದೆಯಂಬಿನ ಸೂತ್ರ, ವಿಧುರೆ, ತೂಬಿನ ಸೂತ್ರ, ಹರವರಿಯ ಸೂತ್ರ, ಚಕ್ರಬಡ್ಡಿ ಇತ್ಯಾದಿ ವಿಷಯಗಳಿವೆ.

**ಸೂತ್ರ:—**

**ಶತಫಳ ಯುಗಳಾಂತರದಿಂ । ಗತವಾಸವನಿರಿದು ಪಡೆದ ಲಾಭದ ಪೊನ್ನಂ ।**
**ಹೃತಿಗೆಯ್ದು ಲಬ್ಧದಿಂದ । ಶತವುಂ ಪೋದಿದೊಡೆ ಬರ್ಕುವಾಲುೂಲ ಧನಂ ॥**

**ಪ್ರಶ್ನೆ:—**

**ಮೂರು ದಿವಸಕ್ಕೆ ಖಂಡುಗ । ದಾರುಂ ಕೊಳಗಂಗಳೆರಡು ಬಳ್ಳಂ ಮಾನಂ**
**ಮೂರಾಗಲ್ ಬರಿಸದಮೇ । ಲಾರುಂ ದಿವಸಕ್ಕೆ ಭತ್ತ ತಾನೆಸಿತಕ್ಕುಂ ॥**

**ದಾಳಿಂಬದ ಬೀಜನರಿಯುವದಕ್ಕೆ**

**ಎಸಳನಿರಿದೆತ್ತು ನಯದಿಂ । ರಸಕೃತಿಯಿಂ ಬೀಜಮಕ್ಕುಮವು ದಾಳಿಂಬ ।**
**ಕ್ಕೆಸಗುಂ ಗುಣಿತ ಕ್ರಮದಿಂ । ವಸಮತಿಗರಿವಂತೆ, ಪೇಳ ಗಣಿತವಿಳಾಸಾ॥**

ದಾಳಿಂಬದ ಕಾಯ್ ಒಂದಕ್ಕೆ ಎಸಳ್ ೫ಕ್ಕೆ, ಲಬ್ಧ ಬೀಜ ೩೬೦.

**ಟೀಕು:—** ಎಸಳ್ ೫ನ್ನು ೨ರಿಂದ ಗುಣಿಸೆ, ೧೦, ರಸಕೃತಿಯಿಂದೆ ವರ್ಗಂಗೊಳಲು ೩೬; ಇದಂ ೧೦ರಿಂದ ಗುಣಿಸಲು ೩೬೦.

**ಕ್ಷೇತ್ರಗಣಿತ:—**

**ವೃತ್ತಾಕಾರದ ಭೂಮಿಯ । ಸುತ್ತಳೆದರ್ಧಮನೆ ಬಿಡುವುದುಳಿದರ್ಧದೊಳಂ ।**
**ಮತ್ತೆರಡು ಭಾಗಮಾಡಿಯೆ । ಮೊತ್ತೊಂದರೊಳೊಂದನೊತ್ತೆ ಶುಭಂ ಬರ್ಕುಂ ॥**

ವ್ಯವಹಾರ ರತ್ನದಲ್ಲಿ ೫ ಅಧಿಕಾರಗಳಿವೆ. ಜೈನಸೂತ್ರೋದಾಹರದಲ್ಲಿ ಪ್ರಶ್ನೆಗಳನ್ನು ಕೊಟ್ಟು ಉತ್ತರ ಪಡೆಯುವ ವಿಧಾನವನ್ನು ಹೇಳಿದೆ. ಚಿತ್ರಹಸುಗೆಯು ಸೂತ್ರರೂಪವಾಗಿದೆ. ಲೀಲಾವತಿಯಲ್ಲಿ ಲೆಕ್ಕಗಳನ್ನು ಮಾಡಿ ತೋರಿಸಿದೆ.

ರಾಜಾದಿತ್ಯನ ನಂತರ ಪ್ರಸಿದ್ಧನಾದವನು ಭಾಸ್ಕರ (೧೬೫೦) ನು.

ಇವನು **ಬೇಹಾರ ಗಣಿತ**ವನ್ನು ಬರೆದಿದ್ದಾನೆ. ಇದರಲ್ಲಿ ೮ ಪ್ರಕರಣಗಳಿವೆ. ಚಕ್ರಬಡ್ಡಿಯ ಸೂತ್ರ, ಪದಪಿನ ಸೂತ್ರ, ಪದಕದ ಸೂತ್ರ, ಮಟ್ಟದ ಸೂತ್ರ, ದೇವಗತಿ ಸಂಯೋಗದ ಸೂತ್ರ, ಬಿರುದಿನ ಲೆಕ್ಕ, ಅಡುಗೂಲ ಸೂತ್ರ, ಟಂಕಸಾಲೆಯಲ್ಲಿ ಕಟ್ಟುವ ಇಚ್ಛಾವರ್ಣಕ್ಕೆ ಸೂತ್ರ, ಇವೇ ಮೊದಲಾದ ವಿಷಯಗಳಿವೆ. ಇವನ ರೀತಿ:—

**ತುರುಗ ಹಡಗೇಳರಿಂದೈ । ತರೆ ವಾರಿಧಿಯೊಳುಪಚಾರಮೆನಲೆಲ್ಲರ್ಗಂ ।**
**ಸರಿಸರಿಯುಂ ಕುಡೆ ತುರಗಂ । ಸರಿಯಾದವು ಕಡೆಗೆ ಹಡಗಿನಶ್ವವ್ರಜವೇಂ॥**

ಇದು ೭ ಹಡಗಗಳಿಗೆ ಕುದುರೆ ನಿಂತ ಮಾರ್ಗ ,೮, ,೧೫, ,೨೯, ,೫೭, ,೧೧೩, ,೨೨೫, ,೪೪೯, ಕಡೆಗೆ ಎಲ್ಲಕ್ಕೂ ಸರಿಯಾದ ಕುದುರೆ ೧೨೮, ೧೨೮, ೧೨೮, ೧೨೮, ೧೨೮, ೧೨೮, ೧೨೮. ಇದು ಸರಿ.

ಇದೇ ಸುಮಾರಿಗೆ, ಚಂದ್ರಮ (೧೬೫೦) ನೆಂಬವನು **ಗಣಿತ ಸಾರ** ವೆಂಬ ಗ್ರಂಥವನ್ನು ಬರೆದಿದ್ದಾನೆ.

ಇದರ ನಂತರ ಪ್ರಸಿದ್ಧವಾದ ಗಣಿತವೆಂದರೆ ಬಾಲವೈದ್ಯದ ಚೆಲುವನ **ಕನ್ನಡ ಲೀಲಾವತಿಯು**. ಇದು ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ನಿಷ್ಕ ಪ್ರಮಾಣ, ವರಹ ಪ್ರಮಾಣ, ಮಣಿಗಟ್ಟಲೆ, ಖಂಡುಗ ಸಂಜ್ಞೆ, ಯೋಜನ ಪ್ರಮಾಣ, ವರ್ಷ ಪ್ರಮಾಣ, ಗಳಿಗೆ ಪ್ರಮಾಣ, ಭಾರ ಸಂಖ್ಯೆ, ಅಳತೆ ಪ್ರಮಾಣ, ಟಂಕೆ ಸೂತ್ರ, ಮುಗ್ಗಿ ಸೂತ್ರ, ಮುತ್ತಿನ ಚಪ್ಪ ಮೊದಲಾದ ವಿಷಯಗಳನ್ನು ಪ್ರತಿಪಾದಿಸಿದ್ದಾನೆ.
ನಿಷ್ಕ ಪ್ರಮಾಣಕ್ಕೆ:—

**ಕವಡೆಗಳಿಪ್ಪತ್ತಾಗಲು । ಪವಣಿಸಿ ಕಾಕಿಣಿಯು ನಾಲ್ಕು ಪಣ ಪದಿನಾರುಂ ।**
**ಭುವನದಿ ದ್ರಮ್ಮಗಳಿನಿತುಂ । ಸವನಿಸೆ ಪದಿನಾರಕದುವೆ ನಿಷ್ಕಮೆನಿಕ್ಕುಂ॥**

ಇದಲ್ಲದೆ ಎಷ್ಟೋ **ಸಂಸ್ಕೃತ ಗ್ರಂಥ**ಗಳಿಗೆ **ಟೀಕೆ**ಗಳಿವೆ.

## ಸ್ಮರಶಾಸ್ತ್ರ

ಕನ್ನಡಿಗರು ರಸಿಕರು. ಯಾವ ಮಹಾಕಾವ್ಯವನ್ನು ತೆಗೆದು ಕೊಂಡರೂ ಶೃಂಗಾರವಿಲ್ಲದೆ ಇಲ್ಲ. ಅದನ್ನು ಶಾಸ್ತ್ರವಾಗಿ ಎಲ್ಲಕ್ಕೂ

ಮೊದಲು ಒರೆದವನೆಂದರೆ, ಚಂದ್ರರಾಜ (೧೦೭೯) ನು. ಇವನು **ಮದನ ತಿಲಕ**ವೆಂಬ ಗ್ರಂಥವನ್ನು ಬರೆದಿದ್ದಾನೆ. ತನ್ನ ಪೋಷಕನಾದ **ಮಾಚಿ ರಾಜ**ನು ತನ್ನ ಹೆಂಡತಿಗೆ ಹೇಳಿದ ಕಾಮತತ್ತ್ವವನ್ನೇ ಗ್ರಂಥರೂಪವಾಗಿ ಬರೆದಂತೆ ಕವಿಯು ಹೇಳುತ್ತಾನೆ. ಗ್ರಂಥಕ್ಕೆ ಮೊದಲು ಮನ್ಮಥನನ್ನು ಸ್ತುತಿಸುತ್ತಾನೆ ಜನ್ನನ (೧೨೦೯) **ಸ್ಮರತಂತ್ರ**ವು ಪ್ರಸಿದ್ಧವಾಗಿಯೇ ಇದೆ. ಕವಿಮಲ್ಲನ **ಮನ್ಮಥ ವಿಜಯ**ವು ಚಂಪೂರೂಪವಾಗಿದೆ. ಇವನೂ ಮೊದಲಿಗೆ ಕಾಮನನ್ನೇ ಸ್ತುತಿಸುತ್ತಾನೆ. ಕಲ್ಲರಸ (೧೪೫೦) ನ **ಜನವಶ್ಯ**ವು ಪ್ರಸಿದ್ಧವಿದೆ. ಇದು ಷಟ್ಪದಿಗಳಲ್ಲಿದೆ. ೧೨ ಸಂಧಿಗಳಿವೆ. 'ಬಿನ್ನಣದ ನೆಲೆವೀಡು। ಕನ್ನಡದ ಪುಟ್ಟುಗಣಿ। ಚೆನ್ನಚೆನ್ನೆಯರಿಚ್ಚೆ ಪೆರ್ಚುವಿಕ್ಕೆ ॥' ಎಂದು ಕವಿಯು ಹೇಳುತ್ತಾನೆ. ಇದರಲ್ಲಿಯ ವಿಷಯ ಗಳನ್ನು ಹೀಗೆ ಹೇಳುತ್ತಾನೆ.

> **ಪುರುಷರಿಂಗಿತಮನಂ। ಬರುಹಮುಖಿಯರ ತೆರನ। ನಿರದವರ**
> **ಸಂಭೋಗ ಸರ್ವಸ್ವ॥ ಪರಿಪರಿಯ ಜಾತಿಸಂ। ಕರ ಭೇದಮೆಂಬಿವಂ॥**

ಇತ್ಯಾದಿ. ಇವನ ಬಂಧವು ಬಹು ಲಲಿತವಾಗಿದೆ. ಇವನ ರೀತಿ:—

> **ಜಾತಿಯನರಿಯದೆ। ಸೋತುದನರಿಯದೆ। ರೀತಿಯನರಿಯದೆ ಸೊಬಗೆಯರ।**
> **ಪ್ರೀತಿಯನರಿಯದೆ। ಭೀತಿಯನರಿಯದೆ। ಕೂರ್ತವನೇ ಕರಿಯಜ್ಞ ಮುಖ॥**
> **ತರುಣಿ ಮನೋಜನ। ಕರಿಣಿಕಲೆಯು ಪು। ಷ್ಕರಣಿ ವಿಲಾಸದ ಸರಣಿ ಮಿಗೆ।**
> **ಪುರುಳರಿಯದ ಬಾ। ಹಿರನೊಳಗಿರಲದು। ಮರುಳನ ಕೈಮಾಣಿಕದಂತೆ॥**

ಇದಲ್ಲದೆ ಕರ್ಕೋಕಶಾಸ್ತ್ರ, ವಾತ್ಸ್ಯಾಯನ ಮೊದಲಾದ ಕಾಮ ಶಾಸ್ತ್ರದ ಸಂಸ್ಕೃತ ಗ್ರಂಥಗಳಿಗೆ, ಕನ್ನಡ ಟೀಕೆಗಳಾಗಿವೆ. ನವಮತ ವಾದಿಗಳು ಈ ಕಡೆಗೆ ಲಕ್ಷ್ಯಕೊಡಬೇಕು.

## ಸೂಪಶಾಸ್ತ್ರ

ಜಯಬಂಧುನಂದನನ ಸೂಪಶಾಸ್ತ್ರವು (೮೦೦) ಎಲ್ಲಕ್ಕೂ ಮೊದಲಿ

ನದು. ಇದು ಪೂರ್ಣ ದೊರೆತಿಲ್ಲ. ಇದೂ ಚಂಪೂರೂಪವಾಗಿದೆ. ಅವನು ಹೇಳುವ ರೀತಿ ನೋಡಿ:—

**ಅರೆದುರ್ದಿನ ಬೆಳೆಯುನೊಂ । ದಿರೆ ಮೊಸರದಿ(?)ನೀರೊಳಿಂಗು ಜೀರಿಗೆ ಕೊತ್ತುಂ ।**
**ಬರಿ ಮೆಣಸಲ್ಲಂ ಬೆರಸಿ । ಡ್ಡರಿಗೆಯುನಡೆ ಕಂಪನಿಂಪುಮಂ ತಳೆದಿರ್ಕುಂ ॥**

ಜಯಬಂಧುವಿನ ನಂತರ ಪ್ರಸಿದ್ಧ ಪಾಕಶಾಸ್ತ್ರಜ್ಞನೆಂದರೆ, **ಮಂಗರಸ** (೧೫೦೮) ನು. ಇವನ ಸೂಪಶಾಸ್ತ್ರವು ವಿಸ್ತಾರವಾದ ಗ್ರಂಥ ವಿದೆ. ಇದರಲ್ಲಿ ೭ ಅಧ್ಯಾಯಗಳಿವೆ. ಪಿಷ್ಟಪಾಕ, ಪಾನಕ, ಕಳಮಾನ್ನ ಪಾಕ, ಶಾಕಪಾಕ ಇತ್ಯಾದಿಗಳ ವರ್ಣನೆಯಿದೆ. 'ಷಡ್ರಸವಿಪಾಕ ಭೇದಮನ್ನನ್ನ ಬಲ್ಲಂದು ಕನ್ನಡದಿ ಒರೆವೆನು ನಳಭೀಮ ಗೌರಿಮತ ದೊಳು ಪೇಳ್ದಸು' ಎಂದು ಕವಿಯು ಹೇಳುತ್ತಾನೆ.

## ಹಾಲಗಾರಿಗೆ

**ಉತ್ತಮದ ಸೊಜ್ಜಿಗೆಯ ನೆನಹಿ ನೀರಂ ಹಿಂಡಿ । ಮತ್ತದಕೆ ಬಟ್ಟವಾಲ್ತಳಿದು ।**
**ಪ್ಪಮಂ ತಳಿದು । ಮೆತ್ತನಪ್ಪಂತು ಮಿದಿದಿರಿಸಿಯುದರರ್ಧ ಹಾಲೊಳಗುಕ್ಕರಿಸಿದಕ್ಕಿಯು ॥**
**ಒತ್ತಿಹಾಲಂದೆರೆದು ಸವೆದ ಕಣಿಕದೊಳು ಬೆರ । ಸುತ್ತ ಸಕ್ಕರೆಯ ಪಾಕದೊಳಿಕ್ಕಿ ಪರಿಮಳವ ॥**
**ನೊತ್ತರಿಸಿ ತುಪ್ಪದೊಳು ಬೇಯಿಸಿದ ಹಾಲಗಾರಿಗೆ ಪಿರಿದು ಸವಿದೋರದೇ ? ॥**

## ಸಂಗೀತ ಶಾಸ್ತ್ರ

**ಕರ್ನಾಟಕ ಸಂಗೀತಶಾಸ್ತ್ರ**ವಂತೂ ಸರ್ವರೂ ತಿಳಿದ ವಿಷಯವೇ ಆಗಿದೆ ಇದಲ್ಲದೆ ಬಾಲವೈದ್ಯ ಚೆಲುವನ ರತ್ನಶಾಸ್ತ್ರವು ಪ್ರಸಿದ್ಧವಿದೆ. ಬಾಣಗಾರಿಕೆ ಮೊದಲಾದವುಗಳ ವಿಷಯವಾಗಿಯೂ ಅನೇಕ ಗ್ರಂಥಗ ಳಿವೆ.

ಹೀಗೆ ಕನ್ನಡ ಸಾಹಿತ್ಯವಾಹಿನಿಯು ಶಾಖೋಪಶಾಖೆಗಳಿಂದೊಡಗೂಡಿ ವಿಸ್ತಾರವಾಗಿ, ಗಂಭೀರವಾಗಿ, ಆಳವಾಗಿ ಹರಿಯುತ್ತಲಿದೆ. ಹೊಸ ಬರ ಹೊಸಧಾಟಿಯನ್ನು ಎದುರು ನೋಡುತ್ತಲಿದೆ.

## ನಮ್ಮ ಸಾಹಿತ್ಯಕಾರರು

ಕನ್ನಡ ಸಾಹಿತ್ಯಕಾರರ ಸಂಖ್ಯೆಯು ವಿಪುಲವಾಗಿದೆ. ಈಗ ಶೋಧವಾಗಿರುವವರ ಸಂಖ್ಯೆಯನ್ನೇ ನೋಡಿದರೂ ಆಶ್ಚರ್ಯವಾಗುವಂತಿದೆ. ನಾವು ಈ ಪುಸ್ತಕದಲ್ಲಿ ಪ್ರಾಚೀನರನ್ನಷ್ಟೇ ಉಲ್ಲೇಖಿಸಿರುವದರಿಂದ ೧೯ನೇ ಶತಮಾನದ ವರೆಗಿನ ಸಂಖ್ಯೆಯನ್ನಷ್ಟೇ ಕೊಡುತ್ತೇವೆ.

| ಗ್ರಂಥಕರ್ತರು | ಜೈನರು | ವೀರಶೈವರು | ಬ್ರಾಹ್ಮಣರು | ಇತರರು |
|---|---|---|---|---|
| ೯೩೩ | ೧೭೪ | ೪೨೬ | ೨೨೯ | ೧೦೪ |

ಇದರಲ್ಲಿ ೧೮೪ ಜನ ವಚನಕಾರರೂ ೫೧ ಜನ ಶಾಸನಕಾರರೂ ೪೨ ಜನ ಸ್ತ್ರೀಯರೂ ಐದು ಜನ ಸಾಮ್ರಾಟರೂ ೨೫ ಜನ ಅರಸರೂ ಇರುವರು. ಎಷ್ಟು ಗ್ರಂಥಗಳು ಹುಳಹುಪ್ಪಡಿಗಳ ಪಾಲಾಗಿ ನಮ್ಮ ಕವಿಗಳ ಹೆಸರನ್ನು ಅಳಿಸಿರುವವೋ ಏನೋ. ಇನ್ನಾದರೂ ಅತ್ತ ಕಡೆಗೆ ಲಕ್ಷ್ಯಕೊಡುವದು ಅವಶ್ಯವಿದೆ.

ಈ ಸಾವಿರಾರು ಜನ ಕವಿಗಳನ್ನೂ ಕವಯಿತ್ರಿಯರನ್ನೂ ಅಪಾರವಾದ ಸಾಹಿತ್ಯರಾಶಿಯನ್ನೂ ನೋಡಿ ಯಾವ ಕನ್ನಡಿಗನಿಗೆ ಹೆಮ್ಮೆಯೆನಿಸಲಿಕ್ಕಿಲ್ಲ ?

# ೧೦. ಕನ್ನಡ ಸಾಹಿತ್ಯದ ಪೋಷಕರು

ಕರ್ನಾಟವು ವೀರರ ನಾಡಿದ್ದಂತೆ, ವಿದ್ಯೆಯ ಬೀಡೂ, ಸಾಹಿತ್ಯ ಸಂಸ್ಕೃತಿ ಕಲೆಗಳ ಗೂಡೂ ಆಗಿದೆ.) ಉತ್ತರ ಭಾರತದಲ್ಲಿ ಕಾಸ್ಮೀರವು ಸರಸತಿಗೆ ತಾಯ್ಮನೆಯಾದರೆ, ದಕ್ಷಿಣ ಭಾರತದಲ್ಲ ಕರ್ನಾಟಕವು ಆಕೆಯ ವಿಹಾರ ಭೂಮಿಯಾಗಿದೆ. ಆದುದರಿಂದಲೆ ಶಾರದಾಂಬೆಯು, ಶಂಕರಾಚಾರ್ಯರೊಡನೆ ನಡೆದು ಬಂದು ಕರ್ನಾಟಕದಲ್ಲಿ ನೆಲೆಯಾಗಿ ನಿಂತಿದ್ದಾಳೆ. ಉತ್ತರ ಭಾರತವು ಕಷ್ಟಕ್ಕೀಡಾಗಿ ಸರಸತಿಯು ಅನಾಥಳಾದ ಸಮಯದಲ್ಲೆಲ್ಲ ಆಕೆಗೆ ಆಶ್ರಯಪನ್ನಿತ್ತು ಸಂರಕ್ಷಿಸಿದ ಕೀರ್ತಿಯು ಭಾರತದಲ್ಲಿ ಕನ್ನಡಿಗರಿಗಿದೆ. ಕಾಸ್ಮೀರದಿಂದ ಬಂದು ಚಾಲುಕ್ಯರ ಆಶ್ರಯದಲ್ಲಿ ನೆಲೆಯಾಗಿ ನಿಂತ ಬಿಲ್ಹಣನು ಇದಕ್ಕೆ ಸಾಕ್ಷಿಯನ್ನು ನುಡಿದಿದ್ದಾನೆ. ವಿಜಯನಗರದ ರಾಯರಿಂದಲೇ ಹಿಂದೂ ಸಂಸ್ಕೃತಿ, ತತ್ತ್ವಜ್ಞಾನಗಳು ಹಿಂದುಸ್ಥಾನದಲ್ಲಿ ಜೀವಂತ ಉಳಿದುವೆಂಬ ಮಾತು ಜಗತ್ಪ್ರಸಿದ್ಧವಿದೆ. ಪಂಪಾಕ್ಷೇತ್ರವು ವಿದ್ಯಾನಗರಿಯಾದುದೇ ಇದಕ್ಕೆ ಸಾಕ್ಷಿ.

ಹೀಗೆ, ವಿದ್ಯಾಪಕ್ಷಪಾತಿಗಳೂ, ಸಾಹಿತ್ಯ - ಸಂಸ್ಕೃತಿ - ಕಲೆಗಳ ಸಂರಕ್ಷಕರೂ ಆದ ಕನ್ನಡ ಸಾಮ್ರಾಟರ ಆಶ್ರಯದಲ್ಲಿ ಕನ್ನಡ ನುಡಿಯು ಬೆಳೆದು ಬಾಳಿದುದರಲ್ಲಿ ಆಶ್ಚರ್ಯವೇನು? ಎಷ್ಟೋ ಜನ ಕನ್ನಡ ರಾಜ ಮಹಾರಾಜರೂ, ರಾಜ್ಞಿಯರೂ ಸ್ವಧೈವ ಕವಿಗಳಾಗಿ ಸಾಹಿತ್ಯಸೇವೆಗೆ ಬದ್ಧಕಂಕಣರಾದುದು ಕಾಣುತ್ತದೆ. ರಾಜರಿಂದಲೂ ಮಹಾರಾಜರಿಂದಲೂ ಮಾಂಡಲಿಕರಿಂದಲೂ ದಂಡನಾಯಕರಿಂದಲೂ ಸೇನಾಪತಿಗಳಿಂದಲೂ ಸೈನಿಕರಿಂದಲೂ ಚಿಕ್ಕ ಪಾಳಯಗಾರರಿಂದಲೂ ಕೂಡ ಕನ್ನಡ ಸಾಹಿತ್ಯ ದೇವಿಯು ಪೂಜಿಸಲ್ಪಟ್ಟು, ವರವಿತ್ತ ಸುಂದರವಾದ ದೃಶ್ಯಗಳು ನಮ್ಮ ಇತಿಹಾಸದ ಪುಟಪುಟಕ್ಕೂ ಕಾಣುತ್ತವೆ.

ಕ್ರಿ. ಶ. ೩–೪ನೆಯ ಶತಮಾನಗಳಿಂದಲೇ ಕನ್ನಡ ರಾಜರ ಐತಿಹಾಸಿಕ ಪರಂಪರೆಗೆ ಪ್ರಾರಂಭವಾಗುತ್ತದೆ. ೪–೫ ಶತಮಾನಗಳಿಂದಂತೂ

ಸಾಮ್ರಾಜ್ಯಗಳೂ ಉದಯವಾದುದು ಕಂಡುಬರುತ್ತದೆ. ೪-ನೆಯ ಶತಮಾನಗಳಿಂದ ಪ್ರಾರಂಭವಾದ ಈ ಕನ್ನಡ ಸಾಮ್ರಾಜ್ಯಗಳ ಆಳಿಕೆಯು ೧೧ನೇ ಶತಮಾನದ ವರೆಗೆ, ಅವ್ಯಾಹತವಾಗಿ ಕಾಣುತ್ತದೆ. ಇದು ಕರ್ನಾಟಕಕ್ಕೆ ಒಳ್ಳೇ ಆದರ್ಶವಾದ ಕಾಲವು. ಸಾಹಿತ್ಯ, ಸಂಸ್ಕೃತಿ, ಕಲೆಗಳು ಹುಲುಸಾಗಿ ಬೆಳೆದುದು ಇದೇ ಕಾಲದಲ್ಲಿಯೇ. ಸಾಹಿತ್ಯದಲ್ಲಿ ದೊರಕಿದ ಮೊದಲನೇ ಗ್ರಂಥಕಾರನಾದ ನೃಪತುಂಗನೇ **ರಾಷ್ಟ್ರಕೂಟ** ಸಾಮ್ರಾಟನು. ಈ ಕಾಲದಲ್ಲಿ ಒಂದರ ಹಿಂದೊಂದು ಸಾಮ್ರಾಜ್ಯವನ್ನೇ ಆದ ಗಂಗರು, ಚಾಲುಕ್ಯರು, ರಾಷ್ಟ್ರಕೂಟರು ಕನ್ನಡ ನುಡಿಯ ಭಕ್ತರು; ಸೇವಕರು; ಪೋಷಕರು. ಸುಪ್ರಸಿದ್ಧ ಕನ್ನಡ ಸಾಹಿತ್ಯಕಾರರಾದ ರತ್ನ ತ್ರಯರು ಬಾಳಿದುದೂ ಈ ಕಾಲದಲ್ಲಿಯೇ. ಮಹಾಕಾವ್ಯಗಳಾದ ಚಂಪೂ ಗ್ರಂಥಗಳು ಉದಯವಾದುದೂ ಇದೇ ಕಾಲದಲ್ಲಿಯೇ.

ನೃಪತುಂಗನು ಉಸುರುವ **ದುರ್ವಿನೀತನು** (ಕ್ರಿ. ಶ ೫೦೦) ಗಂಗ ಮಹಾರಾಜನು. ಇವನು ಕವಿಯು; ಗದ್ಯ ಗ್ರಂಥಕಾರನು. **ಗಂಗರು** ವಿದ್ಯಾಪಕ್ಷಪಾತಿಗಳು. ಗಜಾಷ್ಟಕವನ್ನು ಬರೆದ (೭೮೦-೮೧೪) ಶಿವ-ಮಾರನಿಗೆ, ಗಂಗರೇ ಆಶ್ರಯದಾತರು. ಶೂದ್ರಕ, ಹರಿವಂಶಗಳನ್ನು ಬರೆದ ೧ನೇ ಗುಣವರ್ಮ (೮೮೯) ನಿಗೆ ಇವರೇ **ಪೋಷಕರು**. ಚಾವುಂಡ ರಾಯನ ಪುರಾಣವನ್ನು ಬರೆದ ಚಾವುಂಡರಾಯನು, ಗಂಗರಾಜನಾದ ರಾಚಮಲ್ಲನ ಮಂತ್ರಿಯು. ಈ ರಾಜನ ತಮ್ಮನಾದ ರಕ್ಕಸ ಗಂಗನ ಆಶ್ರಯದಲ್ಲಿಯೇ ನಾಗವರ್ಮನು 'ಛಂದೋಂಬುಧಿ' ಮೊದಲಾದ ಉದ್ಗ್ರಂಥಗಳನ್ನು ಬರೆದಿರುವನು.

**ರಾಷ್ಟ್ರಕೂಟರು** ಸ್ವತಃ ಕವಿಗಳಿದ್ದಂತೆ, ಕವಿಗಳ ಪೋಷಕರೂ ಆಶ್ರಯದಾತರೂ ಆಗಿದ್ದರು. ನೃಪತುಂಗನ ಮಾತಂತೂ ಸರಿಯೇ. ಮೂರನೆಯ ಇಂದ್ರರಾಜನ ದಂಡನಾಯಕನಾದ ವಿಜಯದಂಡನಾಯಕ ನಿಗೆ 'ಅನುಪಮ ಕವಿ' ಎಂಬ ಬಿರುದು ಇದೆ. ಮೂರನೇ ಕೃಷ್ಣನು ಕವಿಚಕ್ರವರ್ತಿಯಾದ ಪೊನ್ನನ ಪೋಷಕನು.

**ಚಾಲುಕ್ಯ**ರಂತೂ ವಿದ್ಯೆಯ ದಾಸರು. ಉತ್ತರದ ಬಿಲ್ಹಣ ಮೊದ-

ಲಾದ ವಿದ್ವಾಂಸರು ಬಂದು ಚಾಲುಕ್ಯ ರಾಜ್ಯದಲ್ಲಿ ನೆಲೆಸಿದ್ದರು. ಗುಣಗಾಂಕ ವಿಜಯಾದಿತ್ಯನ ಆಶ್ರಯದಲ್ಲಿ, 'ಗುಣಗಾಂಕಿಯಂ' ಎಂಬ ಛಂದೋ ಗ್ರಂಥವು ಪ್ರಸಿದ್ಧವಾದದ್ದು ಹಿಂದೆಯೇ ವಿವರಿಸಿದೆ. ಈ ವಂಶದ **ಅರಿಕೇಸರಿಯೇ** ಆದಿಕವಿಯಾದ ಪಂಪನಿಗೆ ಆಶ್ರಯದಾತನು (೯೪೧). ಕವಿಚಕ್ರವರ್ತಿಯೆಂದು ತೈಲಪನಿಂದ ಹೊಗಳಿಸಿಕೊಂಡ ರನ್ನನು ಇವರ ಆಶ್ರಿತನೇ. ಸುಪ್ರಸಿದ್ಧ ಜ್ಯೋತಿಷಿಯಾದ, ಜಾತಕ ತಿಲಕವನ್ನು ಬರೆದ, ಶ್ರೀಧರಾಚಾರ್ಯನು (೧೦೪೯) ಆಹವಮಲ್ಲನ ಆಶ್ರಿತನು ರಾಜ-ರಾಜನ ಆಸ್ಥಾನಕವಿಯಾದ ನನ್ನಯಭಟ್ಟನ ಸಹಾಯಕನಾದ ನಾರಾಯಣಭಟ್ಟನೂ ಇವರಿಂದ ಪೋಷಿತನೇ. ಭುವನೈಕಮಲ್ಲನ ಮಾಂಡಲಿಕನಾದ ಲಕ್ಷ್ಮನೃಪನ ಮಂತ್ರಿಯಾದ ಶಾಂತಿನಾಥನು ಸುಕುಮಾರ ಚರಿತವನ್ನು ಬರೆದನು. ಚಂದ್ರಚೂಡಾಮಣಿಶತಕವನ್ನು ಬರೆದ ನಾಗವರ್ಮಾ-ಚಾರ್ಯರು, ಭುವನೈಕಮಲ್ಲನ ಮಹಾಪ್ರಧಾನನಾದ ಉದಯಾದಿತ್ಯನ ಸಂಧಿವಿಗ್ರಹಿಗಳಾಗಿದ್ದರು. ಚಾಲುಕ್ಯರ ಆಶ್ರಿತನಾದ ಮಾಚಿರಾಜನ ಪ್ರೇರಣೆಯಿಂದ ಚಂದ್ರರಾಜನು ಮದನ ತಿಲಕವೇ ಮೊದಲಾದ ಗ್ರಂಥಗಳನ್ನು ರಚಿಸಿದನು. ಆಹವಮಲ್ಲನ ಮಗನಾದ ಕೀರ್ತಿವರ್ಮನೇ ಗೋ-ವೈದ್ಯವನ್ನು ಬರೆದವನು. ಸಮಯ ಪರೀಕ್ಷೆ, ತ್ರೈಲೋಕ್ಯ ರಕ್ಷಾಮಣಿ ಸ್ತೋತ್ರ ಮೊದಲಾದ ಗ್ರಂಥಗಳನ್ನು ಬರೆದ ಬ್ರಹ್ಮಶಿವನು ಕೀರ್ತಿವರ್ಮನ ಗೆಳೆಯನು. ಎರಡನೆಯ ನಾಗವರ್ಮನು ೨ನೇ ಜಗದೇಕಮಲ್ಲನ ಕಟಕೋಪಾಧ್ಯಾಯನಾಗಿದ್ದನು. ಪಂಚತಂತ್ರ ಕರ್ತೃವಾದ ದುರ್ಗಸಿಂಹನು ಇದೇ ಜಗದೇಕಮಲ್ಲನ ಸಂಧಿವಿಗ್ರಹಿಯು. ಚಾಲುಕ್ಯರು ವಿದ್ಯಾಪಕ್ಷಪಾತಿಗಳಿದ್ದಂತೆ ಉದ್ದಾಮ ಕವಿಗಳೂ ಅಹುದು. ಪುರುಷರಷ್ಟೇ ಅಲ್ಲ, ವೀರಪುಲಕೇಶಿಯ ಸೊಸೆಯಾದ 'ವಿಜಯಾಂಕಾ'ಳಂಥ ಉದ್ದಾಮ ಕವಯಿತ್ರಿಯೂ ಈ ರಾಜ್ಯದಲ್ಲಿ ಹೊಳೆಯುವಳು. ಹೀಗೆ ಸುಮಾರು ೫೦೦ ವರ್ಷಗಳವರೆಗೆ ಗಂಗರು, ರಾಷ್ಟ್ರಕೂಟರು, ಚಾಲುಕ್ಯರುಗಳಿಂದ ಕನ್ನಡ ಸಾಹಿತ್ಯವು ಪೋಷಿಸಲ್ಪಟ್ಟು ಧೀರಗಂಭೀರವಾಗಿ ಬೆಳೆಯಿತು. ಸಾವಿರಾರು ಕವಿಗಳು ಉದಯವಾದರು. ವಿವಿಧ ರೀತಿಯಿಂದ ಕನ್ನಡ ನುಡಿಯನ್ನು ಬೆಳೆಸಿದರು.

೧೧ನೇ ಶತಮಾನದ ಕೊನೆಗೆ, ಸಾಮ್ರಾಜ್ಯಗಳುರುಳಿದವು. ಅಖಿಲ ಕನ್ನಡ ನಾಡಿಗೆ ಒಬ್ಬನೂ ಏಕಛತ್ರಾಧಿಪತಿಯು ಉಳಿಯಲಿಲ್ಲ. ಅಲ್ಲಲ್ಲಿ ಚಿಕ್ಕ ದೊಡ್ಡ ರಾಜ್ಯಗಳು ಉದಯವಾಗಿದ್ದವು. ಕನ್ನಡ ಸಾಹಿತ್ಯ ದೇವಿಯು ಹೊಯ್ಸಳರನ್ನು ಆಶ್ರಯಿಸಿದಳು. ಸವದತ್ತಿಯ ರಟ್ಟರೂ, ಕರಹಾಟದ ಶಿಲಾಹಾರರೂ, ಕಾಕತೀಯರೂ, ಕೊಂಗಾಳ್ವರೂ ಕನ್ನಡ ನುಡಿಯನ್ನು ಸಂರಕ್ಷಿಸಿದರು.

೧೧ನೇ ಶತಮಾನವು ಕರ್ನಾಟಕದಲ್ಲಿ ಧರ್ಮಕ್ರಾಂತಿ, ಹಾಗು ರಾಜ್ಯಕ್ರಾಂತಿಗಳ ಕಾಲ. ಎಲ್ಲೆಲ್ಲಿ ನೋಡಿದರೂ ಕ್ರಾಂತಿಯೇ ಕ್ರಾಂತಿ. ಜೈನಮತವು ಹಿನ್ನಟ್ಟಿ ವೈದಿಕ ಮತವು ಪ್ರಬಲವಾಯಿತು. ಧರ್ಮ ಪ್ರಚಾರಕರು ರಾಜಾಶ್ರಯದಿಂದ ಮತಪ್ರಚಾರವನ್ನು ಕೈಕೊಂಡರು. ಕನ್ನಡ ಸಾಹಿತ್ಯದಲ್ಲಿಯೂ ಕ್ರಾಂತಿಯಾದುದನ್ನು ಹಿಂದೆಯೇ ತಿಳಿಸಿದ್ದೇವೆ ಆದರೂ ಕನ್ನಡ ರಾಜರು ಎಲ್ಲ ಧರ್ಮದವರಿಗೂ ಆಶ್ರಯವನ್ನು ಕೊಟ್ಟುದು ಕಾಣುತ್ತದೆ.

ಚಾಲುಕ್ಯರ ನಂತರ ಸಾಹಿತ್ಯ ದೇವಿಗೆ ಆಶ್ರಯದಾತರು ಸ್ವಾಭಾವಿಕವಾಗಿ **ಹೊಯಿಸಳರೆ.** ಪಂಪ ರಾಮಾಯಣ, ಮಲ್ಲಿನಾಥ ಪುರಾಣ, ಜಿನಮುನಿತನಯ, ಜಿನಾಕ್ಷರ ಮಾಲೆಗಳನ್ನು ಬರೆದ ಅಭಿನವ ಪಂಪನೂ, ಕವೀಶ್ವರಿಯಾದ ಕಂತಿಯೂ ೧ನೇ ಬಲ್ಲಾಳನ (೧೧೦೦–೧೧೦೬) ಆಸ್ಥಾನ ಕವಿಗಳಾಗಿದ್ದರು. ವಿಷ್ಣುವರ್ಧನನು ಸುಪ್ರಸಿದ್ಧ ಗಣಿತಜ್ಞನಾದ ರಾಜಾದಿತ್ಯನಿಗೆ ಆಶ್ರಯದಾತನು. ಜನ್ನನ ತಂದೆಯಾದ ಸುಮನೋಬಾಣನು ೧ನೆಯ ನರಸಿಂಹನ ಕಟಕೋಪಾಧ್ಯಾಯನು. ಇವನ ಮಂತ್ರಿಯು, ದೀಕ್ಷಾಬೋಧೆಯನ್ನು ಬರೆದ ಕೆರೆಯ ಪದ್ಮರಸನು. ಗಿರಿಜಾ ಕಲ್ಯಾಣ, ಪಂಪಾಶತಕಗಳನ್ನು ಬರೆದ ಹರೀಶ್ವರನು ಇವನ ಕರಣಿಕನು. ೨ನೆಯ ಬಲ್ಲಾಳನ ಮಂತ್ರಿಯಾದ ಬೂಚಿರಾಜನು ಪೊನ್ನನಿಗೆ ಸಮಾನನಾದ ಕವಿಯೆಂದು ಪ್ರತೀತಿಯಿದೆ. ಅರ್ಧನೇಮಿಯನ್ನು ಬರೆದ ನೇಮಿಚಂದ್ರನೂ ಇವರ ಸೇವಕರಿಂದ ಪೋಷಿತನೇ. ಜಗನ್ನಾಥ ವಿಜಯವನ್ನು ಬರೆದ ರುದ್ರಭಟ್ಟನು ಎರಡನೇ ಬಲ್ಲಾಳನ ಮಂತ್ರಿಯ ಆಶ್ರಿತನು.

ವರ್ಧಮಾನ ಪುರಾಣವನ್ನು ಬರೆದ ಅಚ್ಚಣ್ಣನೂ ಇವನ ಇನ್ನೊಬ್ಬ ಮಂತ್ರಿಯಿಂದ ಪೋಷಿತನೇ. ಜನ್ನನು ಕವಿಚಕ್ರವರ್ತಿಯೆಂದು ಬಿರುದು ಪಡೆದುದು ಈ ಬಲ್ಲಾಳನಿಂದಲೇ. ಎರಡನೇ ನರಸಿಂಹನ ಮಂತ್ರಿಯಾದ ಪೋಲಾಳ್ವ ದಂಡನಾಥನು ಕವಿಯಿದ್ದು ಹರಿಚಾರಿತ್ರ್ಯವನ್ನು ರಚಿಸಿದ್ದಾನೆ. ಸೂಕ್ತಿಸುಧಾರ್ಣವವನ್ನು ಬರೆದ ಕೇಶಿರಾಜನ ತಂದೆಯಾದ ಮಲ್ಲಿಕಾರ್ಜುನನು ಸೋಮೇಶ್ವರನ ಆಶ್ರಿತನು.

ಬಿಜ್ಜಳನ ಮಂತ್ರಿತ್ವವನ್ನು ಆಶ್ರಯಿಸಿ, ಬಸವೇಶ್ವರನು ಉತ್ತರದಲ್ಲಿ ವೀರಶೈವ ಮತಪ್ರಚಾರವನ್ನು ಕೈಕೊಂಡಿದ್ದರೆ, ಹಾವ, ಅಳಿಯಂದಿರಾದ ಹರಿಹರ ರಾಘವಾಂಕರು ದಕ್ಷಿಣದಲ್ಲಿ ಪಂಪಾಕ್ಷೇತ್ರದಲ್ಲಿ ವೀರಶೈವ ಧ್ವಜವನ್ನು ಎತ್ತಿಹಿಡಿದಿದ್ದರು. ಇವರಿಗೆ ಹೊಯ್ಸಳರೂ, ಕಾಕತೀಯರೂ ಆಶ್ರಿತರು. ವೀರಶೈವ ಧರ್ಮವು ಕಾಕತೀಯರನ್ನೂ ಚಾಲುಕ್ಯರನ್ನೂ ಆಶ್ರಯಿಸಿದರೆ, ಜೈನಧರ್ಮವು ಸವದತ್ತಿಯ ರಟ್ಟರನ್ನೂ ಕರಹಾಟದ ಶಿಲಾಹಾರರನ್ನೂ ಆಶ್ರಯಿಸಿದಂತೆ ಕಾಣುವದು. ಪಾರ್ಶ್ವನಾಥ ಪುರಾಣವನ್ನು ಬರೆದ ಪಾರ್ಶ್ವಪಂಡಿತನು ರಟ್ಟರ ೪ನೆಯ ಕಾರ್ತವೀರ್ಯ (೧೨೦೨) ನ ಆಸ್ಥಾನಕವಿಯಾಗಿದ್ದನು. ಅದೇ ರಾಜನ ಕಾಲದಲ್ಲಿ ಬಾಳಚಂದ್ರಕವಿಯಾದ ಕಂದರ್ಪನು ಇದ್ದಂತೆ ತೋರುತ್ತದೆ. ಇವನ ಕೈಯಲ್ಲಿ ಆಳುತ್ತಿದ್ದ ಶಾಂತಿವರ್ಮನ ಪ್ರೇರಣೆಯಿಂದ ೨ನೆಯ ಗುಣವರ್ಮನು ಪುಷ್ಪದಂತ ಪುರಾಣವನ್ನು ಬರೆದಿರುವನು.

ಶಿಲಾಹಾರರ ರಾಜನಾದ ಲಕ್ಷ್ಮಣರಾಜನ ಆಜ್ಞಾನುಸಾರವಾಗಿ, ಕರ್ಣಪಾರ್ಯನು ನೇಮಿನಾಥ ಪುರಾಣವನ್ನು ಬರೆದಂತೆ ತಿಳಿಯುತ್ತದೆ. ಇವನ ಆಳಿಕೆಯಲ್ಲಿಯೇ ನೇಮಿಚಂದ್ರನು ಲೀಲಾವತಿಯನ್ನು ರಚಿಸಿರುವನು. ಚಂದ್ರನಾಥಾಷ್ಟಕವನ್ನು ಬರೆದ ಮೌಕ್ತಿಕ ಕವಿಯು, ವೀರ ಕೊಂಗಾಳ್ವನ ಕಾಲದಲ್ಲಿದ್ದಂತೆ ತೋರುತ್ತದೆ.

ಚಿಕ್ಕಪುಟ್ಟ ರಾಜರಿಂದಲೂ ಪಾಳಯಗಾರರಿಂದಲೂ ಕನ್ನಡ ಸಾಹಿತ್ಯ ದೇವಿಯು ಸಂರಕ್ಷಿಸಲ್ಪಟ್ಟು, ವಿಜಯನಗರ ಸಾಮ್ರಾಟರ ಕೈಗೆ ಒಪ್ಪಿಸಲ್ಪಟ್ಟಳು.

ಕರ್ನಾಟಕದಲ್ಲಿಯು ಕ್ರಾಂತಿಯು ಕಾಲವು ೧೩ನೆಯ ಶತಮಾನದ ಅಂತ್ಯಕ್ಕೆ ಕೊನೆಗಂಡಿತು. ಪಕ್ಷಪಂಗಡಗಳ ಕಾಲವು ಮುಗಿದು ಏಕ ಛತ್ರಾಧಿಪತ್ಯದ ಕಾಲವು ಬಂದೊದಗಿತು. ವಿಜಯನಗರ ಸಾಮ್ರಾಜ್ಯವು ಉದಯವಾಯಿತು. ವಿದ್ಯೆಯು ತವರೂರಾಯಿತು. ಕನ್ನಡ ಸಾಹಿತ್ಯ ದೇವಿಯೂ ಹಳೇಬೀಡಿನಿಂದ ವಿದ್ಯಾನಗರಿಗೆ ಬಂದು ಆಶ್ರಯ ಪಡೆದಳು.

ಖಗೇಂದ್ರಮಣಿದರ್ಪಣವನ್ನು ಒರೆದ ಮಂಗರಸನು ಮೊದಲನೇ ಹರಿಹರ (೧೩೩೬) ನ ಆಳಿಕೆಯಲ್ಲಿದ್ದನು. ಈನೇ ಹರಿಹರನ ಆಸ್ಥಾನ ಕವಿಯೂ, ಧರ್ಮನಾಥ ಪುರಾಣವನ್ನು ಬರೆದ ಮಧುರನು. ಸೊಬಗಿನ ಸೋನೆ, ಅಮರುಕವನ್ನು ಬರೆದವನು ಬುಕ್ಕಭೂಪಾಲನ ಮೊಮ್ಮಗನಾದ ದೇಪರಾಜನು. ಎರಡನೇ ದೇವರಾಯನ ಕಾಲವೆಂದರೆ, ಕಾವ್ಯಗಳ ಸುಗ್ಗಿಯ ಕಾಲವೆಂದು ಹೇಳಬಹುದು. ಇವನ ಮಂತ್ರಿಯಾದ ಲಕ್ಕಣ್ಣ ದಂಡೇಶನು ಶಿವತತ್ವಚಿಂತಾಮಣಿಯನ್ನು ಬರೆದನು. ಜಕ್ಕಣಾರ್ಯನು ನೂರೊಂದು ಸ್ಥಳವನ್ನು ವಿರಚಿಸಿದನು. ಇವನ ಮಹಾಪ್ರಧಾನನಾದ ಗುರುರಾಜರ ಪ್ರೇರಣೆಯಿಂದ ಚಂದ್ರಕವಿಯೂ ವಿರುಪಾಕ್ಷಸ್ಥಾನ ಮೊದ ಲಾದ ಗ್ರಂಥಗಳನ್ನು ಬರೆದನು. ಈ ಅರಸನ ಪ್ರೋತ್ಸಾಹದಿಂದಲೇ ಚಾಮರಸನು ಪ್ರಭುಲಿಂಗಲೀಲೆಯನ್ನೂ ಮಗ್ಗೆಯ ಮಾಯಿದೇವನು ಶತಕತ್ರಯವನ್ನೂ ಗುರುಬಸವನು ಶಿವಯೋಗಾಂಗ ಭೂಷಣವೇ ಮೊದ ಲಾದ ೭ ಕಾವ್ಯಗಳನ್ನೂ ಒತ್ತಲೇಶ್ವರನು ರಾಮಾಯಣವನ್ನೂ ಕುಮಾರ ವ್ಯಾಸನು ಭಾರತವನ್ನೂ ಬರೆದರು. ಜನವಶ್ಯವನ್ನು ಬರೆದ ಕಲ್ಲರಸನು ಮಲ್ಲಿಕಾರ್ಜುನನ ಆಶ್ರಿತನು. ವಿರೂಪಾಕ್ಷನ ಆಳಿಕೆಯಲ್ಲಿ ತೋಂಟದ ಸಿದ್ಧಲಿಂಗನು ಪ್ರಸಿದ್ಧಿಯನ್ನು ಪಡೆದನು. ಕವಿಲಿಂಗನಪದವೆಂಬ ಗ್ರಂಥ ವನ್ನು ರಚಿಸಿದ ಕವಿಲಿಂಗನು ಸಾಳುವ ನರಸಿಂಹನ ಆಸ್ಥಾನಕವಿಯಾಗಿ ದ್ದನು. ಕೃಷ್ಣದೇವರಾಯನ ಕಾಲದಲ್ಲಿ ಸುಪ್ರಸಿದ್ಧರಾದ ಶ್ರೀಪಾದ ರಾಯರೂ ವ್ಯಾಸರಾಯರೂ ಪುರಂದರದಾಸರೂ ಕನಕದಾಸರೇ ಮೊದ ಲಾದ ದಾಸಶ್ರೇಷ್ಠರಾಗಿ ಹೋದರು. ಕೃಷ್ಣರಾಯನ ಆಜ್ಞಾನುಸಾರ ವಾಗಿಯೇ ತಿಮ್ಮಣ್ಣಕವಿಯು ಉತ್ತರಭಾರತವನ್ನು ಬರೆದನು. ಸದಾ ನಂದ ಶಿವಯೋಗಿಯು ಅಚ್ಯುತರಾಯನ ಆಳಿಕೆಯಲ್ಲಿ ಭಾಗವತವನ್ನು

ಬರೆದನು. ಶಬ್ದಾನುಶಾಸನವನ್ನು ಬರೆದ ಭಟ್ಟಾಕಳಂಕನ ಗುರುವಾದ ಭಟ್ಟಾಕಳಂಕನು ೧ನೆಯ ಶ್ರೀರಂಗರಾಯನ ಆಸ್ಥಾನದಲ್ಲಿದ್ದನು. ಭಟ್ಟಾಕಳಂಕನು ೧ನೆಯ ವೆಂಕಟಪತಿರಾಯನ ಆಳಿಕೆಯಲ್ಲಿದ್ದನು.

ವಿಜಯನಗರ ಸಾಮ್ರಾಜ್ಯದೆಲ್ಲೆಲ್ಲಿಯೂ ಕನ್ನಡ ನುಡಿದೇವಿಯ ಪೂಜೆಯು ನಡೆಯುತ್ತಿತ್ತು. ತುಳುದೇಶದ ದೊರೆಯಾದ ಭೈರವ ನುತ ಪಾಂಡ್ಯನ ಪ್ರೇರಣೆಯಿಂದ (೧೪೩೯) ಕಲ್ಯಾಣಕೀರ್ತಿಯು ಜ್ಞಾನ ಚಂದ್ರಾಭ್ಯುದಯವನ್ನು ಬರೆದನು. ಸಂಗೀತಪುರದ ದೊರೆಯಾದ ಸಂಗಮನ ಆಜ್ಞೆಯಂತೆ, ಕೋಟೀಶ್ವರನು ಜೀವಂಧರ ಷಟ್ಪದಿಯನ್ನು ಬರೆದನು. ಭರತೇಶ್ವರ ಚರಿತೆಯನ್ನು ಬರೆದ (೧೫೫೭) ರತ್ನಾಕರವರ್ಣಿಯು ಭೈರಸ ಒಡೆಯರ ಆಸ್ಥಾನಕವಿಯು. ತುಳುದೇಶಾಧಿಪನಾದ ಸಾಳ್ವ ಮಲ್ಲನ ಆಸ್ಥಾನಕವಿಯೇ ಭಾರತ ಮುಂತಾದ ಕಾವ್ಯಗಳನ್ನು ರಚಿಸಿದ ಸುಪ್ರಸಿದ್ಧ ಸಾಳ್ವನು.

ವಿಜಯನಗರ ಸಾಮ್ರಾಜ್ಯವು ನಷ್ಟವಾದ ಕೂಡಲೆ ಕನ್ನಡ ರಾಜ್ಯ ಲಕ್ಷ್ಮಿಯೂ ಕನ್ನಡ ಸರಸತಿಯೂ **ಮೈಸೂರೊಡೆಯರ** ಆಶ್ರಯಕ್ಕೆ ಬಂದರು. ವಿದ್ಯಾಪ್ರಿಯರಾದ ಮೈಸೂರೊಡೆಯರು ಕನ್ನಡ ನುಡಿಯನ್ನು ಭಕ್ತಿವಿಶ್ವಾಸಗಳಿಂದ ಸಂರಕ್ಷಿಸುತ್ತ ಬಂದಿರುವರು. ರಾಜನೃಪನ (೧೫೭೮–೧೬೧೭) ಮಂತ್ರಿಯಾದ ತಿರುಮಲಾರ್ಯನು ಕರ್ಣವೃತ್ತಾಂತ ಕಥೆಯನ್ನು ಬರೆದಿರುವನು. ಅರಸನಾದ ಚಾಮರಾಜನೇ (೧೬೧೭) ರಾಮಾಯಣ, ಬ್ರಹ್ಮೋತ್ತರಖಂಡಗಳೆಂಬ ಗ್ರಂಥಗಳನ್ನು ರಚಿಸಿರುವನು ಈ ರಾಜನ ಪ್ರೋತ್ಸಾಹದಿಂದಲೇ ರಾಮಚಂದ್ರನು ಅಶ್ವಶಾಸ್ತ್ರವನ್ನೂ ಪದ್ಮಣ ಪಂಡಿತನು ಹಯಸಾರಸಮುಚ್ಚಯವನ್ನೂ ಬರೆದನು. ಕಂಠೀರವ ನರಸರಾಜ ವಿಜಯವನ್ನು ಬರೆದ ಗೋವಿಂದ ವೈದ್ಯರು ಇವರ ಆಸ್ಥಾನಕವಿಗಳು. ಇವರಿಂದಲೇ ಪೋಷಿಸಲ್ಪಟ್ಟ ಭಾಸ್ಕರನು ಬೇಹಾರ ಗಣಿತವನ್ನು ಬರೆದನು. ಚಿಕ್ಕದೇವರಾಜನು (೧೬೭೨) ಚಿಕ ದೇವರಾಜ ಬಿನ್ನಪವೇ ಮೊದಲಾದ ಕಾವ್ಯಗಳನ್ನು ರಚಿಸಿರುವನು. ಇವನ ಕಾಲವು ವಿಜಯನಗರದ ಕೃಷ್ಣದೇವರಾಯನ ಕಾಲವಿದ್ದಂತೆ. ಇವನ

ಪ್ರೇರಣೆಯಿಂದ ಅನೇಕ ಕವಿಗಳು ಉತ್ತೇಜಿತರಾಗಿ ಕಾವ್ಯಗಳನ್ನು ಬರೆದಿದ್ದಾರೆ. ತಿರುಮಲಾರ್ಯನು ಅಪ್ರತಿಮ ವೀರಚರಿತೆ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಚಿಕ್ಕುಪಾಧ್ಯಾಯನು ಕಮಲಾಚಲ ಮಹಾತ್ಮ್ಯೆ, ತಿಮ್ಮಕವಿಯು ಯಾದವಗಿರಿ ಮಹಾತ್ಮ್ಯೆ ಮೊದಲಾದವುಗಳನ್ನು ರಚಿಸಿದರು. ಶ್ರೀರಂಗ ಮಹಾತ್ಮ್ಯೆಯನ್ನು ಬರೆದ ಮಲ್ಲಿಕಾರ್ಜುನನೂ ಮಿತ್ರವಿಂದಾ ಗೋವಿಂದ ನಾಟಕವನ್ನು ಬರೆದ ಸಿಂಗರಾರ್ಯನೂ ಚಿಕದೇವರಾಜ ವಂಶಾವಳಿಯನ್ನು ಬರೆದ ವೇಣುಗೋಪಾಲ ವರಪ್ರಸಾದನೂ ಮುನಿವಂಶಾಭ್ಯುದಯವನ್ನು ಬರೆದ ಚಿದಾನಂದ ಕವಿಯೂ ಇವರಿಂದಲೇ ಪ್ರೋತ್ಸಾಹಿತರು. ಹೊನ್ನಮ್ಮನು ಹದಿಬದೆಯ ಧರ್ಮವನ್ನೂ ಶೃಂಗಾರಮ್ಮನು ಪದ್ಮಿನಿ ಕಲ್ಯಾಣವನ್ನೂ ರಚಿಸಿದುದು ಇವರ ಉತ್ತೇಜನದಿಂದಲೇ. ಕನ್ನಡ ಲೀಲಾವತಿ, ರತ್ನಶಾಸ್ತ್ರಗಳನ್ನು ಬರೆದ ಬಾಲವೈದ್ಯದ ಚೆಲುವನು ಒಂದನೆಯ ಕೃಷ್ಣರಾಯನ ಆಶ್ರಿತನು. ಈ ರಾಜನ ಮಹಿಷಿಯಾದ ಚೆಲ್ವಾಂಬೆಯು ವರ ನಂದೀಕಲ್ಯಾಣ ಮೊದಲಾದ ಗ್ರಂಥಗಳನ್ನು ಬರೆದಿದ್ದಾಳೆ. ೨ನೇ ಕೃಷ್ಣರಾಯನ ಪ್ರೇರಣೆಯಿಂದ ವೆಂಕಾಮಾತ್ಯನು ರಾಮಾಯಣ, ಇಂದಿರಾ ಮೊದಲಾದ ಗ್ರಂಥಗಳನ್ನು ಬರೆದನು. ಇವರ ಮಾವಂದಿರಾದ ಕತ್ತಿಗೋಪಾಲರಾಜರು ಕಮಲಾಚಲ ಮಹಾತ್ಮ್ಯವನ್ನು ರಚಿಸಿದ್ದಾರೆ. ಶ್ರೀರಂಗಮಹಾತ್ಮ್ಯವನ್ನು ಬರೆದ ಸಿಂಗರಾಚಾರ್ಯನು ಚಾಮರಾಜನ (೧೭೭೦) ಆಶ್ರಿತನು. ಖಾಸಾ ಚಾಮರಾಜರ ರಾಜ್ಞಿಯರಾದ ದೇವಿ ವೀರಮ್ಮಣ್ಣಿಯ ಪ್ರೇರಣೆಯಿಂದ ದೇವಚಂದ್ರನು ರಾಜಾವಳಿಯ ಕಥೆಯನ್ನು ರಚಿಸಿದನು.

ಇದಲ್ಲದೆ ಕರ್ನಾಟಕದಲ್ಲಿ ಅಲ್ಲಲ್ಲಿಗೆ ದೊರೆಗಳಾಗಿದ್ದ ಉಮ್ಮತ್ತೂರು ಕೆಳದಿ, ಇಕ್ಕೇರಿ, ಸುಗಟೂರು, ಬೇಲೂರು, ನುಗ್ಗೆಹಳ್ಳಿ, ಪಿರಿಯಪಟ್ಟಣ, ಹದಿನಾಡು, ಚಿಕ್ಕನಾಯಕನ ಹಳ್ಳಿ, ಮುದಿಗೆರೆ, ಬಿಜ್ಜವರ ಕಳಲೆ ಮುಂತಾದ ಸ್ಥಳಗಳ ಪಾಳಯಗಾರರೂ ಕವಿಗಳಿಗೆ ಪೋಷಕರಾಗಿದ್ದರು.*

---

* ಇದಕ್ಕಿಂತಲೂ ಹೆಚ್ಚು ವಿಸ್ತೃತವಾಗಿ ವಿಷಯ ಬೇಕಾದವರು ಕವಿಚರಿತೆಯ ಎರಡನೆಯ ಭಾಗವನ್ನು ನೋಡಬೇಕು.

ಹೀಗೆ ಕನ್ನಡ ಸಾಹಿತ್ಯವಾಹಿನಿಯು, ಗಂಗರ ಸಾಮ್ರಾಜ್ಯದಲ್ಲಿ ಉದಯವಾಗಿ, ರಾಷ್ಟ್ರಕೂಟರ ಕಾಲದಲ್ಲಿ ಗೋದಾವರಿ ತೀರದಲ್ಲಿ ಮೈ-ದೋರಿ, ಕಿಸುವೊಳಲೇ ಮೊದಲಾದ ಸ್ಥಳಗಳಲ್ಲಿ ಗಂಭೀರವಾಗಿ ಹರಿದು, ಚಾಲುಕ್ಯರ ಸಾಮ್ರಾಜ್ಯದಲ್ಲಿ ವಿವಿಧ ರೂಪಗಳನ್ನು ತಾಳಿ, ಹೊಯ್ಸಳರ ರಾಜ್ಯದಲ್ಲಿ ಬೇರೊಂದು ರೂಪವನ್ನು ಧರಿಸಿ, ಹೊಸದಾರಿಯನ್ನು ಹಿಡಿದು, ಶಾಖೋಪಶಾಖೆಗಳಿಂದೊಡಗೂಡಿ, ಪಂಪಾವಿರೂಪಾಕ್ಷನ ಸೇವೆಗೆಯ್ದು, ಮೈಸೂರರಸರ ಕೃಪೆಗೆ ಪಾತ್ರವಾಗಿ, ನವಯುಗದ ನವರೂಪವನ್ನು ಧರಿಸಿ, ಪ್ರಜಾಪ್ರಭುತ್ವದ ಪ್ರಭುವಿನ ಸನ್ನಿಧಿಯನ್ನು ಸೇರಲು ಹವಣಿ-ಸುತ್ತಿದೆ.

—

# ೧೧. ಕನ್ನಡದ ವ್ಯಾಪ್ತಿ

ಕನ್ನಡ ಸಾಹಿತ್ಯದ ವಿಷಯವಾಗಿ ಹೇಳಬೇಕಾದ ಅಂಶಗಳನ್ನೆಲ್ಲ ಹೇಳಿದ್ದಾಯಿತು. ಇನ್ನೊಂದು ಸಂಗತಿಯನ್ನು ಹೇಳುವುದು ಅವಶ್ಯ ವಿದೆ. ಅದೇ ಕನ್ನಡದ ವ್ಯಾಪ್ತಿಯು. ಕನ್ನಡ ಸಾಹಿತ್ಯವು ತನ್ನ ವಿಹಾರ ಭೂಮಿ ಯಾವುದೆಂದು ಹೇಳುವುದು ?

ಆದಿಕವಿಯಾದ ನೃಪತುಂಗನು ತನ್ನ ಕವಿರಾಜಮಾರ್ಗದಲ್ಲಿ ಗೋದಾವರಿಯಿಂದ ಕಾವೇರಿಯ ವರೆಗೆ ಇರುವ ನಾಡೇ **ಕನ್ನಡದ ತಿರುಳ್** ಎಂದರೆ ಮಧ್ಯದೇಶವೆಂದು ಹೇಳುತ್ತಾನೆ. ಅರ್ಥಾತ್ ಅದರ ಮೇಲ್ಗೊಂದಿಕೆಯಾಗಿ ಇನ್ನೂ ವಿಸ್ತಾರವಾದ ಸ್ಥಾನವನ್ನು ಆಕ್ರಮಿಸಿರುವುದು ನೈಸರ್ಗಿಕವು. ಇದನ್ನೇ ವಿಸ್ತರಿಸಿ ಗೆಳೆಯ ಶಂ. ಬಾ. ಜೋಶಿ ಅವರು ಕನ್ನಡದ ಎಲ್ಲೆಯು ನರ್ಮದೆಯವರೆಗೆ ಎಂದು ಸಿದ್ಧಪಡಿಸಿದ್ದಾರೆ. ಆದರೆ ಗ್ರಂಥಸ್ಥವಾದ ಸ್ಪಷ್ಟವಾದ ಆಧಾರವು ನೃಪತುಂಗನದೇ.

**ಕಾವೇರಿಯಿಂದಮಾಗೋ । ದಾವರಿವರಮಿರ್ದ ನಾಡದಾ ಕನ್ನಡದೋಳ್ ।**
**ಭಾವಿಸಿದಂ ಜನಪದಂ ವಸು । ಧಾವಳಯ ವಿಲೀನ ವಿಶದ ವಿಷಯ ವಿಶೇಷಂ ॥**
**ಅದರೊಳಗಂ ಕಿಸುವೊಳಲಾ । ವಿದಿತ ಮಹಾಕೋಪಣನಗರದಾ ಪುಲಿಗೆರೆಯಾ ।**
**ಸದಭಿಸ್ತುತಮಪ್ಪೊಂಕುಂ । ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥**

ನೃಪತುಂಗನು ಕನ್ನಡದ ವ್ಯಾಪ್ತಿಯನ್ನು ಹೇಳುವದಲ್ಲದೆ ಕನ್ನಡದ ಗಂಡುಮೆಟ್ಟುಗಳಾದ, **ಕಿಸುವೊಳಲ್, ಕೋಪಣನಗರ, ಪುಲಿಗೆರೆ, ಒಂಕುಂದ**ಗಳನ್ನು ಹೇಳುತ್ತಾನೆ. ಇವನು ಹೇಳುವ ಬಹುಭಾಗವು ಈಗ ಮರಾಠಿಗರಿಂದ ಆಕ್ರಮಿಸಲ್ಪಟ್ಟಿದೆ. ಇದನ್ನು ಲೋಕಮಾನ್ಯರೂ ಮಹಾರಾಷ್ಟ್ರದ ಇತಿಹಾಸಕಾರರೂ ಒಪ್ಪಿಕೊಂಡಿದ್ದಾರೆ. ಗೋದಾವರಿಯಿಂದ

ಕನ್ನಡವು ಕೃಷ್ಣೆಗೆ ಸರಿದಿದೆ. ಇದನ್ನು ಕನ್ನಡ ತರುಣರು ವಿಚಾರಿಸುವ ಮಾತು.

ಆದಿಪಂಪನು ತನ್ನ ಭಾರತವನ್ನು ಪುಲಗೆರೆಯ ತಿರುಳ್ಗನ್ನಡದಲ್ಲಿ ಬರೆದೆನೆಂದು ಹೇಳುತ್ತಾನೆ. ರನ್ನನು ಎರಡೂ ಸೇರಿ ಆರುನೂರಾಗುವ ಪ್ರದೇಶದ ಕನ್ನಡವು ತಿರುಳ್ಗನ್ನಡವೆಂದೂ ತಾನು ಅದರಲ್ಲಿ ಬರೆದಿರುವೆನೆಂದೂ ಹೇಳುತ್ತಾನೆ. ರನ್ನನು ಹೇಳುವ ಎರಡು ಎಂಬುದು, ಬೆಳುವಲ ಮುನ್ನೂರಿಗೂ ಪುಲಿಗೆರೆ ಮುನ್ನೂರಿಗೂ ಅನ್ವಯಿಸುತ್ತದೆ.* ಎರಡರು-ನೂರು ಎಂಬ ಮಾತು ಕುಂತಳ ದೇಶಕ್ಕೆ ಅಲಂಕಾರವಾಗಿದ್ದಿತೆಂದು ಕಲಾಶ ಶಾಸನದಿಂದ ತಿಳಿಯುತ್ತದೆ.

ತಾನು ಹೇಳುವ ಕನ್ನಡನಾಡಿನ ವೈದುಷ್ಯಚಾತುರ್ಯಗಳ ವಿಷಯ-ವಾಗಿ ನೃಗತುಂಗನು ಈ ರೀತಿಯಾಗಿ ಹೇಳುತ್ತಾನೆ:

**ಪದನರಿದು ನುಡಿಯಲುಂನುಡಿ । ನುಡಿದುದನರಿದಾರಯಲು ಮಾರ್ಪರಾ ನಾಡವರ್ಗಳ್**
**ಚದುರರ್ ನಿಜದಿಂ ಕುರಿತೋ । ದದೆಯುಂ ಕಾವ್ಯಪ್ರಯೋಗ ಪರಿಣ ತಮತಿಗಳ್**
**ಕುರಿತವರಲ್ಲದೆ ಮತ್ತಂ । ಪೆರರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್**
**ಕಿರುವಕ್ಕಳು ಮೂಮೂಗರು । ಮರಿಪಲ್ಕರಿವರ್ ವಿವೇಕಮಂ ಮಾತುಗಳಂ ।**

**ವಂದೇ ಕರ್ಣಾಟ ಮಾತರಂ**

---

* ಬೆಳ್ವೊಲ ಮುನೂರುಮಂ ಪುಲಗೆರೆ ಮುನೂರುಮಂ ಎರಡರುನೂಱುಮಂ ಎಫಿಗ್ರಾಫಿಕ್ ಇಂಡಿಯಾ, XV, ೩೩೯.